

# ಹಿಂದೂಧರ್ಮ ಎಂದರೇನು?

ಮಹಾತ್ಮಾ ಗಾಂಧೀ

ಅನುವಾದ

ಎನ್. ಬಾಲಸುಬ್ರಹ್ಮಣ್ಯ




ಭಾರತೀಯ ಇತಿಹಾಸ ಸಂಶೋಧನ ಮಂಡಲಿಯ

ಪರವಾಗಿ

ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

# ವಿಷಯ ಸೂಚಿ

# ಪ್ರಸ್ತಾವನೆ

ಮಹಾತ್ಮಾ ಗಾಂಧೀ ಅವರ 125 ನೇ ಜನ್ಮ ಶತಾಬ್ದಿಯ ಸಂದರ್ಭದಲ್ಲಿ ಹಿಂದೂಧರ್ಮದ ಬಗ್ಗೆ ಅವರ ವಿಶಾಲ ತಿಳುವಳಿಕೆಯನ್ನು ಓದುಗರ ಮುಂದೆ ಇಡಲು ನನಗೆ ಸಂತೋಷವಾಗುತ್ತದೆ. ಅವರ ಯಂಗ್ ಇಂಡಿಯಾ, ಹರಿಜನ ಮತ್ತು ನವಜೀವನ ಪತ್ರಿಕೆಗಳಲ್ಲಿ ಹಿಂದೀ ಮತ್ತು ಗುಜರಾತಿ ಭಾಷೆಗಳಲ್ಲಿ ಬರೆದ ಲೇಖನಗಳ ಆಯ್ದ ಸಂಗ್ರಹವಿದು. ವಿವಿಧ ಸಂದರ್ಭಗಳಲ್ಲಿ ಈ ಲೇಖನಗಳನ್ನು ಬರೆಯಲಾಗಿದ್ದರೂ ಅವು ಹಿಂದೂಧರ್ಮದ ಒಟ್ಟಾರೆ ನೋಟವಾಗಿದೆ.

"ಹಿಂದೂಧರ್ಮ ಎಂದರೇನು?" ಎಂಬುದರ ಬಗ್ಗೆ ಮಹಾತ್ಮರ ಈ ವಿಚಾರಗಳು ಎಂದೆಂದಿಗೂ ಬಹಳ ಮುಖ್ಯವಾಗಿರುತ್ತವೆ. ಇಂದಿನ ಪರಿಸ್ಥಿತಿಯಲ್ಲಂತೂ ಇವುಗಳು ಬಹಳ ಮಹತ್ವಪೂರ್ಣದ್ದಾಗಿವೆ.

ಈ ಸಂಕಲನವನ್ನು ಸಿದ್ಧಪಡಿಸುವಲ್ಲಿ ನೆಹರೂ ಮ್ಯೂಸಿಯಂನಲ್ಲಿನ ನನ್ನ ಸಹೋದ್ಯೋಗಿ ಹಾಗೂ ಅಲ್ಲಿನ ಉಪ ನಿರ್ದೇಶಕ ಡಾ. ಹರಿದೇವ್ ಶರ್ಮ ಅವರಿಂದ ಬಹಳಷ್ಟು ನೆರವು ದೊರಕಿದೆ. ಭಾರತೀಯ ಇತಿಹಾಸ ಸಂಶೋಧನಾ ಮಂಡಲಿಯ ಪರವಾಗಿ ಈ ಪುಸ್ತಕವನ್ನು ಇಂಗ್ಲಿಷ್ ಮತ್ತು ಹಿಂದೀ ಭಾಷೆಗಳಲ್ಲಿ ಅಲ್ಪ ಸಮಯದಲ್ಲೇ ಪ್ರಕಟಿಸಿರುವ ನ್ಯಾಷನಲ್ ಬುಕ್ ಟ್ರಸ್ಟಿಗೆ ನಾನು ಆಭಾರಿಯಾಗಿದ್ದೇನೆ.

ರವೀಂದ್ರ ಕುಮಾರ್

ಹೊಸ ದೆಹಲಿ

26 ಏಪ್ರಿಲ್ 1994

ಅಧ್ಯಕ್ಷರು

ಭಾರತೀಯ ಇತಿಹಾಸ ಸಂಶೋಧನಾ ಮಂಡಲಿ



# 1

# ಹಿಂದೂಧರ್ಮ ಎಂದರೇನು?

ಹಿಂದೂಧರ್ಮಕ್ಕೆ ಒಂದು ಅಧಿಕೃತ ಸಿದ್ಧಾಂತವಿಲ್ಲದಿರುವುದು ಅದರ ಭಾಗ್ಯ ಅಥವಾ ದೌರ್ಭಾಗ್ಯ. ಆದ್ದರಿಂದ ಯಾವುದೇ ತಪ್ಪುಗ್ರಹಿಕೆಯಿಂದ ನನ್ನನ್ನು ರಕ್ಷಿಸಿಕೊಳ್ಳುವುದಕ್ಕಾಗಿ, ಸತ್ಯ ಮತ್ತು ಅಹಿಂಸೆ ನನ್ನ ಸಿದ್ಧಾಂತ ಎಂದು ನಾನು ಹೇಳಿದ್ದೇನೆ. ಹಿಂದೂ ಸಿದ್ಧಾಂತದ ಲಕ್ಷಣವನ್ನು ನಿರೂಪಿಸಿ ಎಂದು ನನ್ನನ್ನು ಕೇಳಿದಲ್ಲಿ, ನಾನು ಸುಮ್ಮನೆ ಇಷ್ಟು ಹೇಳಬಹುದು: ಅಹಿಂಸೆಯ ಸಾಧನದ ಮೂಲಕ ಸತ್ಯದ ಅನುಸರಣೆ. ಒಬ್ಬ ವ್ಯಕ್ತಿ ದೇವರನ್ನು ಕೂಡ ನಂಬದಿರಬಹುದು, ಆದರೂ ತನ್ನನ್ನು ಒಬ್ಬ ಹಿಂದೂ ಎಂದು ಕರೆದುಕೊಳ್ಳಬಹುದು. ಹಿಂದೂಧರ್ಮ ಪಟ್ಟುಬಿಡದ ಸತ್ಯಾನ್ವೇಷಣೆ. ಇಂದು ಅದು ಮೃತಪ್ರಾಯವಾಗಿ, ನಿಷ್ಕ್ರಿಯವಾಗಿ, ಬೆಳವಣಿಗೆಗೆ ಪರಿಸ್ಪಂದಿಸದೆ ಇರುವಂತೆ ಆಗಿದ್ದಲ್ಲಿ ಅದಕ್ಕೆ ಕಾರಣ ನಾವು ಬಳಲಿರುವುದು. ಈ ಬಳಲಿಕೆ ಕಳೆದಕೂಡಲೇ ಹಿಂದೂಧರ್ಮವು ಪ್ರಾಯಶಃ ಹಿಂದೆ ಕಂಡಿರದಿದ್ದ ಉಜ್ವಲತೆಯಿಂದ ಪ್ರಪಂಚದಲ್ಲಿ ಹಠಾತ್ತಾಗಿ ಗೋಚರವಾಗುವುದು. ಆದ್ದರಿಂದ ಎಲ್ಲ ಧರ್ಮಗಳಲ್ಲಿ ಹಿಂದೂಧರ್ಮವು ಅತ್ಯಂತ ಸಹಿಷ್ಣತೆಯುಳ್ಳದ್ದು. ಅದರ ಸಿದ್ಧಾಂತ ಸರ್ವವ್ಯಾಪಕವಾದುದು.

*ಯಂಗ್ ಇಂಡಿಯಾ*, 24 ಏಪ್ರಿಲ್ 1924



# 2

# ಹಿಂದೂ ಧರ್ಮದಲ್ಲಿ ಸೈತಾನನಿದ್ದಾನೆಯೇ?

ನನ್ನ ಅಭಿಪ್ರಾಯದಲ್ಲಿ ಹಿಂದೂಧರ್ಮದ ಸ್ವಾರಸ್ಯವಿರುವುದು ಅದರ ವ್ಯಾಪಕವಾದ ಸರ್ವಗ್ರಾಹಿತ್ವದಲ್ಲಿ. ಮಹಾಭಾರತದ ದಿವ್ಯಕವಿ ತನ್ನ ಮಹಾಕೃತಿಯ ಬಗ್ಗೆ ಹೇಳಿದ್ದು ಹಿಂದೂಧರ್ಮದ ಬಗ್ಗೆಯೂ ಸಮಾನವಾಗಿ ಸತ್ಯವಾಗಿದೆ. ಇತರ ಯಾವುದೇ ಧರ್ಮದಲ್ಲಿರುವ ಸಾರ ಹಿಂದೂಧರ್ಮದಲ್ಲಿ ಸರ್ವದಾ ಕಂಡುಬರುತ್ತದೆ. ಅದರಲ್ಲಿ ಇಲ್ಲದಿರುವುದು ಸಾರಹಿತವಾದದು ಅಥವಾ ಅನಗತ್ಯವಾದುದು ಮಾತ್ರ.

*ಯಂಗ್ ಇಂಡಿಯಾ*, 17 ಸೆಪ್ಟೆಂಬರ್ 1925



## 3

# ನಾನು ಹಿಂದೂ ಆಗಿರುವುದೇಕೆ?

ಭಾರತದ ಆಜೀವ ಸ್ನೇಹಿತೆ ತಾನೆಂದು ಹೇಳಿಕೊಳ್ಳುವ ಅಮೆರಿಕದ ಸ್ನೇಹಿತೆ ಒಬ್ಬಳು ಹೀಗೆ ಬರೆಯುತ್ತಾಳೆ:

> ಹಿಂದೂ ಧರ್ಮ ಪೂರ್ವಖಂಡದ ಪ್ರಧಾನ ಧರ್ಮಗಳಲ್ಲಿ ಒಂದು ಆಗಿರುವುದರಿಂದ ಮತ್ತು ನೀವು ಈಗಾಗಲೇ ಹಿಂದೂಧರ್ಮ ಮತ್ತು ಕ್ರೈಸ್ತಧರ್ಮಗಳನ್ನು ಅಧ್ಯಯನ ಮಾಡಿರುವುದರಿಂದ, ಹಾಗೂ ಆ ಅಧ್ಯಯನದ ಆಧಾರದ ಮೇಲೆ ನೀವು ಒಬ್ಬ ಹಿಂದೂ ಎಂದು ಘೋಷಿಸಿಕೊಂಡಿರುವದರಿಂದ, ನೀವು ನಿಮ್ಮ ಆ ಆಯ್ಕೆಗೆ ಕಾರಣಗಳನ್ನು ತಿಳಿಸುವ ಕೃಪೆ ಮಾಡುವಿರಾ ಎಂದು ಕೇಳಲು ನಿಮ್ಮ ಅನುಜ್ಞೆ ಬೇಡುತ್ತೇನೆ. ದೇವರನ್ನು ಅರಿಯುವುದು ಮತ್ತು ಅಂತಃಕರಣದಲ್ಲಿ ಮತ್ತು ವಾಸ್ತವದಲ್ಲಿ ಅವನನ್ನು ಪೂಜಿಸುವುದು ಮಾನವನ ಪ್ರಮುಖ ಆವಶ್ಯಕತೆ ಎನ್ನುವುದನ್ನು ಹಿಂದೂಗಳು ಹಾಗೂ ಕ್ರೈಸ್ತರು ಸಮಾನವಾಗಿ ಮನಗಂಡಿದ್ದಾರೆ. ಕ್ರಿಸ್ತನು ದೇವರ ಒಂದು ಅಭಿವ್ಯಕ್ತಿಯಾಗಿದ್ದ ಎಂದು ನಂಬಿ ಅಮೆರಿಕದ ಕ್ರೈಸ್ತರು ಭಾರತದ ಜನಕ್ಕೆ ಕ್ರಿಸ್ತನ ವಿಷಯ ತಿಳಿಸಲು ತಮ್ಮ ಸಹಸ್ರಾರು ಪುತ್ರಪುತ್ರಿಯರನ್ನು ಭಾರತಕ್ಕೆ ಕಳುಹಿಸಿದ್ದಾರೆ. ಇದಕ್ಕೆ ಪ್ರತಿಯಾಗಿ ನೀವು ದಯವಿಟ್ಟು ಹಿಂದೂಧರ್ಮದ ಬಗ್ಗೆ ನಿಮ್ಮ ವಿವರಣೆಯನ್ನು ನಮಗೆ ನೀಡುತ್ತೀರಾ? ಹಿಂದೂಧರ್ಮವನ್ನು ಕ್ರಿಸ್ತನ ಉಪದೇಶಗಳೊಂದಿಗೆ ಹೋಲಿಸಿ ಹೇಳುತ್ತೀರಾ? ನಿಮ್ಮ ಇಂತಹ ಕೃಪೆಗಾಗಿ ನಾನು ನಿಮಗೆ ಬಹಳ ಕೃತಜ್ಞಳಾಗಿರುತ್ತೇನೆ.

ಅನೇಕ ಕ್ರೈಸ್ತಮತ ಪ್ರಚಾರಕ ಸಭೆಗಳಲ್ಲಿ ನಾನು ಇಂಗ್ಲಿಷ್ ಮತ್ತು ಅಮೆರಿಕನ್ ಮತ ಪ್ರಚಾರಕರಿಗೆ ಇದನ್ನು ಹೇಳುವ ಸಾಹಸ ಮಾಡಿದ್ದೇನೆ; ಈ ಪ್ರಚಾರಕರು ಭಾರತಕ್ಕೆ ಕ್ರಿಸ್ತನ ಬಗ್ಗೆ "ಹೇಳುವುದನ್ನು" ಬಿಟ್ಟು, ಗುಡ್ಡದ ಮೇಲಿನ ಉಪದೇಶಕ್ಕೆ ಅನುಗುಣವಾಗಿ ಬಾಳಿ-ಬದುಕಿದ್ದರೆ, ಭಾರತವು ಅವರ ಬಗ್ಗೆ ಸಂದೇಹ ಪಡುತ್ತಿರಲಿಲ್ಲ. ಬದಲು ಅವರು ತನ್ನ ಮಕ್ಕಳ ನಡುವೆ ಬಾಳಿದ್ದನ್ನು ಭಾರತ ಮೆಚ್ಚುತ್ತಿತ್ತು ಮತ್ತು ಅವರ ಉಪಸ್ಥಿತಿಯಿಂದ ನೇರ ಪ್ರಯೋಜನ ಪಡೆಯುತ್ತಿತ್ತು. ಈ ಅಭಿಪ್ರಾಯವುಳ್ಳ ನಾನು ಅಮೆರಿಕದ ಸ್ನೇಹಿತರಿಗೆ ಹಿಂದೂಧರ್ಮದ ಬಗ್ಗೆ "ಪ್ರತಿಯಾಗಿ" ಏನನ್ನೂ "ಹೇಳಲಾರೆ" ಜನರು, ಇತರರಿಗೆ ತಮ್ಮ ಮತದ ವಿಷಯವನ್ನು ಬೋಧಿಸುವುದರಲ್ಲಿ ಅದರಲ್ಲೂ ಅವರನ್ನು ಮತಾಂತರಿಸುವ ದೃಷ್ಟಿಯಿಂದ ಹೇಳುವುದರಲ್ಲಿ ನನಗೆ ನಂಬಿಕೆಯಿಲ್ಲ. ಬರಿ ಮಾತಿನಿಂದ ಧರ್ಮವನ್ನು ಅರಿಯಲಾಗದು. ಅದರಂತೆ ಬಾಳಿಯೇ ಅದನ್ನು ಅರಿಯಬೇಕು. ಆಗ ಅದು ಸ್ವಪ್ರಚಾರಕವಾಗುತ್ತದೆ.

ನನ್ನ ಸ್ವಂತ ಬದುಕಿನ ಮೂಲಕ ಹೊರತು, ಹಿಂದೂಧರ್ಮದ ಬಗ್ಗೆ ಯಾವುದೇ ವ್ಯಾಖ್ಯಾನ ನೀಡಲು ನಾನು ಸಮರ್ಥನೆಂದು ನಾನು ಅಂದುಕೊಂಡಿಲ್ಲ. ಬರಹದ ಮೂಲಕ ಹಿಂದೂಧರ್ಮವನ್ನು ವ್ಯಾಖ್ಯಾನಿಸಲು ನನಗೆ ಆಗದಿದ್ದಲ್ಲಿ, ಅದನ್ನು ಕ್ರೈಸ್ತಮತದೊಡನೆ ಹೋಲಿಸಲೂ ಆಗುವುದಿಲ್ಲ. ಆದ್ದರಿಂದ ನಾನು ಮಾಡಬಹುದಾದ ಒಂದೇ ಒಂದು ಕೆಲಸವೆಂದರೆ, ನಾನು ಏಕೆ ಹಿಂದೂ ಆಗಿದ್ದೇನೆ ಎಂಬುದನ್ನು ಆದಷ್ಟು ಸಂಕ್ಷಿಪ್ತವಾಗಿ ಹೇಳುವುದು.

ಅನುವಂಶಿಕತೆಯ ಪ್ರಭಾವದಲ್ಲಿ ನಾನು ನಂಬಿರುವುದರಿಂದ, ಹಿಂದೂ ಕುಟುಂಬವೊಂದರಲ್ಲಿ ಹುಟ್ಟಿರುವುದರಿಂದ, ನಾನು ಒಬ್ಬ ಹಿಂದೂ ಆಗಿ ಉಳಿದಿದ್ದೇನೆ. ನನ್ನ ನೈತಿಕ ಪ್ರಜ್ಞೆಗೆ ಅಥವಾ ಆಧ್ಯಾತ್ಮಿಕ ಬೆಳವಣಿಗೆಗೆ ಅದು ಅಸಂಗತವೆಂದು ಕಂಡುಬಂದಲ್ಲಿ ನಾನು ಅದನ್ನು ತ್ಯಜಿಸುತ್ತೇನೆ. ಅದನ್ನು ಪರೀಶೀಲಿಸಿದ ತರುವಾಯ, ನನಗೆ ತಿಳಿದಿರುವ ಧರ್ಮಗಳಲ್ಲೆಲ್ಲಾ ಅದು ಅತ್ಯಂತ ಸಹಿಷ್ಣುವಾದುದು ಎಂಬುದನ್ನು ನಾನು ಕಂಡುಕೊಂಡೆ. ಮತಸಿದ್ಧಾಂತದಿಂದ ಅದು ಮುಕ್ತವಾಗಿರುವುದು ನನಗೆ ಬಲವಾಗಿ ಹಿಡಿಸುತ್ತದೆ, ಏಕೆಂದರೆ ಅದು ಅದರ ಅನುಯಾಯಿಯ ಸ್ವಾಭಿವ್ಯಕ್ತಿಗೆ ವಿಪುಲವಾದ ಅವಕಾಶ ನೀಡುತ್ತದೆ. ಅದು ಅನ್ಯನಿಷೇಧಕ ಧರ್ಮವಲ್ಲ. ಆದ್ದರಿಂದ ಆ ಧರ್ಮದ ಅನುಯಾಯಿಗಳು ಇತರ ಎಲ್ಲಾ ಧರ್ಮಗಳನ್ನು ಗೌರವಿಸುವುದು ಮಾತ್ರ ಅಲ್ಲದೆ, ಇತರ ಧರ್ಮಗಳಲ್ಲಿರಬಹುದಾದ ಒಳ್ಳೆಯದೆಲ್ಲವನ್ನೂ ಮೆಚ್ಚಿ, ಮೈಗೂಡಿಸಿಗೊಳ್ಳಲು ಅವರನ್ನು ಸಮರ್ಥರನ್ನಾಗಿಯೂ ಅದು ಮಾಡುತ್ತದೆ.

ಅಹಿಂಸೆ ಎಲ್ಲ ಧರ್ಮಗಳಿಗೂ ಸಮಾನವಾಗಿದೆ. ಆದರೆ, ಅದು ಅತ್ಯುನ್ನತ ಅಭಿವ್ಯಕ್ತಿಯನ್ನು ಮತ್ತು ಅನ್ವಯವನ್ನು ಹಿಂದೂಧರ್ಮದಲ್ಲಿ ಪಡೆದುಕೊಂಡಿದೆ. (ಜೈನಧರ್ಮ ಅಥವಾ ಬೌದ್ಧಧರ್ಮವನ್ನು ನಾನು ಹಿಂದೂಧರ್ಮದಿಂದ ಬೇರೆ ಎಂದು ಪರಿಗಣಿಸುವುದಿಲ್ಲ.) ಹಿಂದೂಧರ್ಮವು ಕೇವಲ ಮಾನವಜೀವನದ ಏಕತೆಯಲ್ಲಿ ಮಾತ್ರ ನಂಬಿಕೆಯಿಡದೆ, ಜೀವಂತವಾಗಿರುವ ಎಲ್ಲದರ ಏಕತೆಯಲ್ಲಿ ನಂಬಿಕೆ ಇಡುತ್ತದೆ. ನನ್ನ ಅಭಿಪ್ರಾಯದಲ್ಲಿ ಅದರ ಗೋಪೂಜೆ ಮಾನವೀಯತೆಯ ವಿಕಾಸಕ್ಕೆ ಅದರ ಅನನ್ಯ ಕೊಡುಗೆಯಾಗಿದೆ. ಅದು ಜೀವವೆಲ್ಲದರ ಏಕತೆಯಲ್ಲಿನ ಮತ್ತು, ಆ ಕಾರಣದಿಂದ ಪಾವಿತ್ರ್ಯದಲ್ಲಿನ ನಂಬಿಕೆಯ ಪ್ರಾಯೋಗಿಕ ಅನ್ವಯವಾಗಿದೆ. ಪುನರ್ಜನ್ಮದಲ್ಲಿನ ಅದರ ಮಹಾಶ್ರದ್ಧೆ ಆ ನಂಬಿಕೆಯ ಒಂದು ನೇರ ಫಲ. ಕೊನೆಯದಾಗಿ ವರ್ಣಾಶ್ರಮ ನಿಯಮದ ಆವಿಷ್ಕಾರವು ಅವಿರತ ಸತ್ಯಶೋಧನೆಯ ಒಂದು ಅದ್ಭುತ ಫಲ. ಇಲ್ಲಿ ಸ್ಥೂಲವಾಗಿ ಹೇಳಿರುವ ಮುಖ್ಯತತ್ವಗಳ ಲಕ್ಷಣನಿರೂಪಣೆಗಳ ಹೊರೆಯನ್ನು ನಾನು ಈ ಲೇಖನದ ಮೇಲೆ ಹೇರಬಾರದು. ಆದರೆ ಗೋಪೂಜೆ ಮತ್ತು ವರ್ಣಾಶ್ರಮಗಳ ಬಗೆಗಿನ ಇಂದಿನ ಕಲ್ಪನೆಗಳು, ನನ್ನ ಅಭಿಪ್ರಾಯದಲ್ಲಿ, ಅವುಗಳ ಮೂಲರೂಪದ ಅಣಕು ಚಿತ್ರಣ ಎಂದು ಹೇಳಬೇಕಾಗಿದೆ. ನನ್ನನ್ನು ತನ್ನ ಚೌಕಟ್ಟಿನ ಒಳಗೆ ಉಳಿಸಿಕೊಂಡಿರುವ ಹಿಂದೂಧರ್ಮದ ಪ್ರಮುಖ ಲಕ್ಷಣಗಳೆಂದು ನನಗೆ ಅನಿಸಿರುವುದನ್ನು ಇಲ್ಲಿ ಸಂಕ್ಷಿಪ್ತವಾಗಿ ನಿರೂಪಿಸಿದ್ದೇನೆ.

*ಯಂಗ್ ಇಂಡಿಯಾ*, 20 ಅಕ್ಟೋಬರ್ 1927



# 4

# ಹಿಂದೂಧರ್ಮ

ನಾನೊಬ್ಬ ಸನಾತನಿ ಹಿಂದೂ ಎಂಬುದನ್ನು ದೃಢವಾಗಿ ಹೇಳಿದ್ದೇನೆ. ಆದರೂ ಹಿಂದೂಧರ್ಮದ ಹೆಸರಿನಲ್ಲಿ ಸಾಮಾನ್ಯವಾಗಿ ನಡೆಯುತ್ತಿರುವ ಕೆಲವು ಸಂಗತಿಗಳನ್ನು ನಾನು ಕಡೆಗಣಿಸುತ್ತೇನೆ. ನಾನು ಸನಾತನಿ ಹಿಂದೂ ಆಗಿರದಿದ್ದರೆ ಹಾಗೆ ಅಥವಾ ಬೇರೆ ಯಾವುದೇ ಆಗಿ ಕರೆಯಿಸಿಕೊಳ್ಳಲು ನನಗೆ ಇಷ್ಟವಿಲ್ಲ. ಆದ್ದರಿಂದ, ನನ್ನ ಅರ್ಥದಲ್ಲಿ, ಸನಾತನ ಹಿಂದೂಧರ್ಮ ಎಂದರೇನು ಎಂಬುದನ್ನು ಒಮ್ಮೆಗೇ ಸ್ಪಷ್ಟಪಡಿಸುವುದು ನನಗೆ ಅಗತ್ಯವಾಗಿದೆ. ಸನಾತನ ಎಂಬ ಪದವನ್ನು ಅದರ ಸಹಜವಾದ ಅರ್ಥದಲ್ಲಿ ಬಳಸುತ್ತೇನೆ.

ನಾನು ನನ್ನನ್ನು ಒಬ್ಬ ಸನಾತನಿ ಹಿಂದೂ ಎಂದು ಕರೆದುಕೊಳ್ಳುತ್ತೇನೆ. ಏಕೆಂದರೆ,

1 ವೇದಗಳು, ಉಪನಿಷತ್ತುಗಳು, ಪುರಾಣಗಳು ಮತ್ತು ಹಿಂದೂ ಶಾಸ್ತ್ರಗಳೆಂದು ಹೆಸರು ಹೊತ್ತ ಎಲ್ಲವನ್ನೂ ಹಾಗೂ ಆ ಕಾರಣದಿಂದಾಗಿ ಅವತಾರಗಳು ಮತ್ತು ಪುನರ್ಜನ್ಮ – ಇವನ್ನು- ನಾನು ನಂಬುತ್ತೇನೆ;

2. ವರ್ಣಾಶ್ರಮಧರ್ಮವನ್ನು ನನ್ನ ಅಭಿಪ್ರಾಯದಂತೆ, ಅದರ ವೈದಿಕ ಅರ್ಥದ ಹೊರತು ಅದರ ಇಂದಿನ ಜನಸಾಮಾನ್ಯ ಹಾಗೂ ಅಪರಿಷ್ಕೃತ ಅರ್ಥದಲ್ಲಿ ನಾನು ನಂಬಲಾರೆ;

3. ಜನಸಾಮಾನ್ಯಾರ್ಥಕ್ಕಿಂತ ವಿಶಾಲವಾದ ಅರ್ಥದಲ್ಲಿ ನಾನು ಗೋರಕ್ಷಣೆಯನ್ನು ನಂಬುತ್ತೇನೆ;

4. ನನಗೆ ಮೂರ್ತಿಪೂಜೆಯಲ್ಲಿ ಅಪನಂಬಿಕೆ ಇಲ್ಲ.

ವೇದಗಳಿಗೆ ಅಥವಾ ಇತರ ಯಾವುದೇ ಧರ್ಮಗ್ರಂಥಗಳಿಗೆ ಸಂಬಂಧಿಸಿದಂತೆ, ನಾನು ದೈವೀಮೂಲ ಎಂಬ ಪದವನ್ನು ಉದ್ದೇಶಪೂರ್ವಕವಾಗಿಯೇ ಬಳಸದೆ ಇರುವುದನ್ನು ಓದುಗನು ಗಮನಿಸುತ್ತಾನೆ. ಏಕೆಂದರೆ ವೇದಗಳು ಮಾತ್ರವೇ ದೈವಿಕವಾದವು ಎಂಬುದನ್ನು ನಾನು ನಂಬುವುದಿಲ್ಲ. ಬೈಬಲ್ಲು, ಕುರಾನು ಮತ್ತು ಜೆಂಡ್‌ಅವೆಸ್ತಾ ಸಹ ವೇದಗಳಷ್ಟೇ ದೈವೀಕವಾಗಿ ಪ್ರೇರಿತವಾದವು ಎಂಬುದು ನನ್ನ ನಂಬಿಕೆ. ಹಿಂದೂಧರ್ಮಗ್ರಂಥಗಳಲ್ಲಿ ನನಗೆ ನಂಬಿಕೆ ಇರುವ ಮಾತ್ರ ಅವುಗಳಲ್ಲಿನ ಪ್ರತಿಶಬ್ದ ಮತ್ತು ಪ್ರತಿಶ್ಲೋಕ ದೇವರಿಂದ ಪ್ರೇರಿತವಾದುದು ಎಂದು ನಾನು ಅಂಗೀಕರಿಸಬೇಕಾದ ಅಗತ್ಯವಿಲ್ಲದಿಲ್ಲ. ಈ ಅದ್ಭುತಗ್ರಂಥಗಳ ನೇರ ಪರಿಚಯ ನನಗಿದೆಯೆಂದು ನಾನು ಹೇಳಿಕೊಳ್ಳುವುದೂ ಇಲ್ಲ. ಆದರೆ ಈ ಧರ್ಮಗ್ರಂಥಗಳ ಮುಖ್ಯೋಪದೇಶದ ತತ್ವಗಳ ಜ್ಞಾನ ಮತ್ತು ಅರಿವು ನನಗಿದೆಯೆಂದು ದೃಢವಾಗಿ ಹೇಳುತ್ತೇನೆ. ಅವುಗಳ ಯಾವುದೇ ವ್ಯಾಖ್ಯಾನ, ಅದೆಷ್ಟೇ ಪಾಂಡಿತ್ಯಪೂರ್ಣವಾಗಿರಲಿ, ಅದು ತರ್ಕಕ್ಕೆ ಅಥವಾ ನೈತಿಕದೃಷ್ಟಿಗೆ ವಿರುದ್ಧವಾಗಿದ್ದಲ್ಲಿ ಅದಕ್ಕೆ ಕಟ್ಟುಬೀಳಲು ನಾನು ನಿರಾಕರಿಸುತ್ತೇನೆ. ಇಂದಿನ ಶಂಕರಾಚಾರ್ಯರುಗಳು ಮತ್ತು ಶಾಸ್ತ್ರಿಗಳು ಹಿಂದೂ ಧರ್ಮಗ್ರಂಥಗಳ ಸರಿಯಾದ ವಿವರಣೆಯನ್ನು ನೀಡುತ್ತಾರೆ ಎಂಬ ವಾದವನ್ನು – ಅಂಥದ್ದನ್ನೇನಾದರೂ ಅವರು ಮುಂದಿಟ್ಟಲ್ಲಿ – ನಾನು ಅತ್ಯಂತ ಆಗ್ರಹಪೂರ್ವಕವಾಗಿ ನಿರಾಕರಿಸುತ್ತೇನೆ. ತದ್ವಿರುದ್ಧವಾಗಿ ಈ ಗ್ರಂಥಗಳ ವಿಷಯದಲ್ಲಿ ನಮ್ಮ ಸದ್ಯದ ಜ್ಞಾನ ಅತ್ಯಂತ ಗೊಂದಲದ ಸ್ಥಿತಿಯಲ್ಲಿದೆ ಎಂದು ಅಭಿಪ್ರಾಯಪಡುತ್ತೇನೆ. ಅಹಿಂಸೆ, ಸತ್ಯ ಮತ್ತು ಬ್ರಹ್ಮಚರ್ಯಗಳಲ್ಲಿ ಪರಿಪೂರ್ಣತೆಯನ್ನು ಸಾಧಿಸದ ಮತ್ತು ಸಂಪತ್ತಿನ ಎಲ್ಲಾ ಆರ್ಜನೆ ಹಾಗೂ ಸ್ವಾಮ್ಯಗಳನ್ನು ತ್ಯಜಿಸದ ಯಾರೂ ಶಾಸ್ತ್ರಗಳನ್ನು ಅರಿತವರಲ್ಲ ಎಂಬ ಹಿಂದೂ ಸೂತ್ರವನ್ನು ನಾನು ಸಂಪೂರ್ಣವಾಗಿ ನಂಬುತ್ತೇನೆ. ಗುರುಪದ್ಧತಿಯಲ್ಲಿ ನನಗೆ ನಂಬಿಕೆ ಇದೆ. ಆದರೆ ಈ ಯುಗದಲ್ಲಿ ಲಕ್ಷಾಂತರ ಜನ ಒಬ್ಬ ಗುರುವಿಲ್ಲದೆ ಹೋಗಬೇಕಾಗಿದೆ, ಏಕೆಂದರೆ ಪೂರ್ಣಪರಿಶುದ್ಧತೆ ಮತ್ತು ಪರಿಪೂರ್ಣ ಪಾಂಡಿತ್ಯಗಳ ಸಂಯೋಗವನ್ನು ಕಾಣುವುದು ಒಂದು ಅಪರೂಪದ ಸಂಗತಿ. ಆದರೆ ತಮ್ಮ ಧರ್ಮದ ಸತ್ಯಸ್ವರೂಪವನ್ನು ಎಂದಾದರೂ ಅರಿತುಕೊಳ್ಳುವಬಗ್ಗೆ ಯಾರೂ ನಿರಾಶರಾಗಬೇಕಾಗಿಲ್ಲ, ಏಕೆಂದರೆ ಪ್ರತಿಯೊಂದು ಮಹಾನ್ ಧರ್ಮದ್ದರಂತೆಯೇ, ಹಿಂದೂಧರ್ಮದ ಮೂಲತತ್ವಗಳು ವ್ಯತ್ಯಾಸ ಆಗದಂತಹವು ಮತ್ತು ಸುಲಭವಾಗಿ ಅರ್ಥವಾಗುವಂತಹವು. ಪ್ರತಿಯೊಬ್ಬ ಹಿಂದೂ ದೇವರು ಮತ್ತು ಅವನ ಐಕ್ಯತೆಯಲ್ಲಿ, ಪುನರ್ಜನ್ಮ ಮತ್ತು ಮೋಕ್ಷದಲ್ಲಿ ನಂಬುತ್ತಾನೆ.

ನನ್ನ ಹೆಂಡತಿಯನ್ನು ಕುರಿತ ನನ್ನ ಮನೋಭಾವವನ್ನು ಹೇಗೆ ವರ್ಣಿಸಲಾರೆನೋ ಹಾಗೆಯೇ ಹಿಂದೂಧರ್ಮವನ್ನು ಕುರಿತ ನನ್ನ ಮನೋಭಾವವನ್ನು ಸಹ ನಾನು ವರ್ಣಿಸಲಾರೆ. ಆಕೆ ನನ್ನ ಮನಸ್ಸನ್ನು ಪ್ರಪಂಚದಲ್ಲಿನ ಇನ್ನಾವುದೇ ಹೆಂಗಸು ಮಾಡಲಾಗದಷ್ಟು ಪ್ರಚೋದಿಸುತ್ತಾಳೆ. ಆಕೆಯಲ್ಲಿ ದೋಷಗಳು ಇಲ್ಲವೆಂದೇನೂ ಅಲ್ಲ. ನಾನೇ ನೋಡುವುದಕ್ಕಿಂತಲೂ, ನನಗೆ ಕಾಣುವುದಕ್ಕಿಂತಲೂ ಇನ್ನೂ ಹೆಚ್ಚಿನ ದೋಷಗಳು ಆಕೆಯಲ್ಲಿವೆ ಎಂದು ನಾನು ಹೇಳಬಲ್ಲೆ. ಆದರೆ ಬಿಗಿಯಾಗಿ ಬಂಧಿಸಿಡುವ ಭಾವ ಅದರಲ್ಲಿದೆ. ಅದರ ಎಲ್ಲಾ ಲೋಪದೋಷಗಳಿದ್ದಾಗ್ಯೂ ಹಿಂದೂಧರ್ಮದ ಬಗ್ಗೆ ನನ್ನ ಭಾವ ಅದೇ ರೀತಿಯಾಗಿದೆ. ಗೀತೆ ಮತ್ತು ತುಲಸಿದಾಸರ ರಾಮಾಯಣದ ಮಾಧುರ್ಯ ನನ್ನನ್ನು ಉತ್ತೇಜಿಸುವಷ್ಟು ಬೇರಾವುದೂ ಉತ್ತೇಜಿಸದು. ನನಗೆ ಗೊತ್ತಿದೆ ಎಂದು ಹೇಳಿಕೊಳ್ಳಬಹುದಾದ ಹಿಂದೂಧರ್ಮದ ಗ್ರಂಥಗಳೆಂದರೆ ಇವೆರಡೇ. ನಾನು ನನ್ನ ಕೊನೆಯುಸಿರು ಎಳೆಯುತ್ತಿದ್ದೇನೆ ಎಂದು ಅಂದುಕೊಂಡಾಗ ನನಗೆ ನೆಮ್ಮದಿ ನೀಡಿದ್ದು ಗೀತೆ. ಎಲ್ಲಾ ದೊಡ್ಡ ಹಿಂದೂದೇವಾಲಯಗಳಲ್ಲಿ ಇಂದು ನಡೆಯುತ್ತಿರುವ ದುರಾಚಾರ ನನಗೆ ಗೊತ್ತಿದೆ. ಆದರೆ ಹೇಳಬಾರದ ಕೊರತೆಗಳಿಂದ ಕೂಡಿದ್ದರೂ ಅವು ನನಗೆ ಪ್ರಿಯವಾಗಿವೆ. ಅವುಗಳಲ್ಲಿ ನಾನು ಆಸಕ್ತಿ ತೋರುತ್ತೇನೆ. ಆ ಆಸಕ್ತಿಯನ್ನು ಬೇರಾವುದರಲ್ಲಿಯೂ ತೋರುವುದಿಲ್ಲ. ನಾನು ಪೂರ್ತಿಯಾಗಿ ಒಬ್ಬ ಸುಧಾರಕ. ಆದರೆ ನನ್ನ ಉತ್ಸಾಹ ಹಿಂದೂಧರ್ಮದ ಮುಖ್ಯಾಂಶಗಳಲ್ಲಿನ ಯಾವುದನ್ನೇ ನಿರಾಕರಿಸುವ ಸ್ಥಿತಿಗೆ ಎಂದಿಗೂ ನನ್ನನ್ನು ಒಯ್ಯುವುದಿಲ್ಲ. ಮೂರ್ತಿಪೂಜೆಯಲ್ಲಿ ನನಗೆ ಅಪನಂಬಿಕೆ ಇಲ್ಲ ಎಂದು ನಾನು ಹೇಳಿದ್ದೇನೆ. ಒಂದು ವಿಗ್ರಹ ನನ್ನಲ್ಲಿ ಯಾವುದೇ ಪೂಜ್ಯಭಾವವನ್ನು ಎಬ್ಬಿಸುವುದಿಲ್ಲ. ಆದರೆ ಮೂರ್ತಿಪೂಜೆ ಮಾನವಸ್ವಭಾವದ ಒಂದು ಅಂಶ ಎಂದು ನಾನು ಭಾವಿಸುತ್ತೇನೆ. ನಾವು ಸಾಂಕೇತಿಕತೆಗಾಗಿ ಹಾತೊರೆಯುತ್ತೇವೆ. ಒಬ್ಬ ವ್ಯಕ್ತಿ ಬೇರೆ ಯಾವುದೇ ಜಾಗಕ್ಕಿಂತಲೂ ಚರ್ಚೊಂದರಲ್ಲಿ ಏಕೆ ಹೆಚ್ಚು ಮನಸ್ಸಮಾಧಾನ ಪಡೆಯಬೇಕು? ವಿಗ್ರಹಗಳು ಪೂಜೆಗೆ ಒಂದು ಸಾಧನ. ಯಾವ ಹಿಂದುವೂ ವಿಗ್ರಹವೊಂದನ್ನು ದೇವರೆಂದು ಬಾವಿಸುವುದಿಲ್ಲ. ಮೂರ್ತಿಪೂಜೆಯನ್ನು ನಾನು ಒಂದು ಪಾಪವೆಂದು ಪರಿಗಣಿಸುವುದಿಲ್ಲ.

ಹಿಂದೂಧರ್ಮವು ಒಂದು ಅನ್ಯನಿಷೇಧಕ ಧರ್ಮವಲ್ಲವೆಂಬುದು ಈ ಮೇಲಿನದರಿಂದ ಸ್ಪಷ್ಟವಾಗಿದೆ. ಅದರಲ್ಲಿ ಪ್ರಪಂಚದ ಎಲ್ಲಾ ಪ್ರವಾದಿಗಳ ಪೂಜೆಗೆ ಅವಕಾಶವಿದೆ. ಪ್ರಚಾರಕ ಎಂಬ ಪದದ ಸಾಮಾನ್ಯಾರ್ಥದಲ್ಲಿ ಅದೊಂದು ಮತಪ್ರಚಾರಕ ಧರ್ಮವಲ್ಲ. ಅದು ಅನೇಕ ಬುಡಕಟ್ಟುಗಳನ್ನು ತನ್ನ ಬಳಗದಲ್ಲಿ

ವಿಲೀನಗೊಳಿಸಿಕೊಂಡಿರುವುದರಲ್ಲಿ ಸಂಶಯವಿಲ್ಲ. ಆದರೆ ಈ ವಿಲೀನತೆ ಕ್ರಮವಾದ ಅಗೋಚರವಾದ ವಿಕಾಸದ ರೀತಿಯದು. ಪ್ರತಿಯೊಬ್ಬನೂ ತನ್ನ ಸ್ವಂತ ಮತಧರ್ಮಕ್ಕೆ ಅನುಸಾರವಾಗಿ ದೇವರನ್ನು ಪೂಜಿಸುವಂತೆ ಹಿಂದೂಧರ್ಮ ಹೇಳುತ್ತದೆ. ಆದ್ದರಿಂದ ಅದು ಎಲ್ಲಾ ಧರ್ಮಗಳ ಜೊತೆ ಸ್ನೇಹದಿಂದ ಬಾಳುತ್ತದೆ.

ಹಿಂದೂಧರ್ಮದ ನನ್ನ ಕಲ್ಪನೆ ಇದಾಗಿರುವುದರಿಂದ, ಅಸ್ಪೃಶ್ಯತೆಯೊಂದಿಗೆ ರಾಜಿಮಾಡಿಕೊಳ್ಳಲು ನನಗೆ ಎಂದಿಗೂ ಸಾಧ್ಯವಾಗಿಲ್ಲ. ನಾನದನ್ನು ಯಾವಾಗಲೂ ಒಂದು ವಿಕೃತ ಬೆಳವಣಿಗೆಯೆಂದೇ ಭಾವಿಸಿದ್ದೇನೆ. ತಲೆತಲಾಂತರಗಳಿಂದ ಅದು ನಮಗೆ ಒದಗಿಬಂದಿರುವುದು ನಿಜ, ಅಂತೆಯೇ ಅನೇಕ ದುಷ್ಪದ್ಧತಿಗಳೂ ಇಂದಿನವರೆಗೂ ಉಳಿದುಕೊಂಡು ಬಂದಿವೆ. ಹುಡುಗಿಯರನ್ನು ವಸ್ತುತಃ ವೇಶ್ಯವೃತ್ತಿಗೆ ಮುಡಿಪು ಬಿಡುವುದು ಹಿಂದೂಧರ್ಮದ ಒಂದು ಅಂಶವಾಗಿತ್ತು ಎನ್ನುವುದನ್ನು ಚಿಂತಿಸುವುದು ಸಹ ನಾಚಿಕೆಗೇಡಿನ ಸಂಗತಿ ಎಂದು ನನಗನಿಸುತ್ತದೆ. ಆದರೂ ಇಂಡಿಯದ ಅನೇಕ ಭಾಗಗಳಲ್ಲಿ ಅದು ಹಿಂದೂಗಳಿಂದ ಆಚರಿಸಲ್ಪಡುತ್ತಿದೆ. ಕಾಳಿಗೆ ಮೇಕೆಗಳನ್ನು ಬಲಿಕೊಡುವುದು ಸ್ಪಷ್ಟ ಅಧರ್ಮ ಎಂದು ನಾನು ಭಾವಿಸುತ್ತೇನೆ ಮತ್ತು ಅದನ್ನು ಹಿಂದೂಧರ್ಮದ ಒಂದು ಅಂಶವೆಂದು ಪರಿಗಣಿಸುವುದಿಲ್ಲ. ಹಿಂದೂಧರ್ಮ ಎಂಬ ಹೆಸರೇ ವಿದೇಶೀಯರು ಹಿಂದೂಸ್ತಾನದ ಜನರ ಧರ್ಮಕ್ಕೆ ಕೊಟ್ಟ ಹೆಸರು. ಒಂದಾನೊಂದು ಕಾಲದಲ್ಲಿ ಧರ್ಮದ ಹೆಸರಿನಲ್ಲಿ ಪ್ರಾಣಿಗಳನ್ನು ಬಲಿಕೊಡುತ್ತಿದ್ದುದರಲ್ಲಿ ಸಂದೇಹವಿಲ್ಲ. ಆದರೆ ಅದು ಧರ್ಮವಲ್ಲ, ಹಿಂದೂಧರ್ಮವಂತೂ ಅಲ್ಲವೇ ಅಲ್ಲ. ಆದ್ದರಿಂದಲೇ ಗೋರಕ್ಷಣೆ ನಮ್ಮ ಪೂರ್ವಜರಿಗೆ ಒಂದು ಧಾರ್ಮಿಕವಿಧಿಯಾದಾಗ ಗೋಮಾಂಸ ತಿನ್ನುವುದನ್ನು ಮುಂದುವರೆಸಿದವರು ಬಹಿಷ್ಕೃತರಾದರು ಎಂದು ನನಗೆ ಕಾಣುತ್ತದೆ. ಆ ಸಾಮಾಜಿಕ ಸಂಘರ್ಷ ಘೋರವಾಗಿದ್ದಿರಬೇಕು. ಸಾಮಾಜಿಕ ಬಹಿಷ್ಕಾರವು ನಿಯಮೋಲ್ಲಂಘನೆ ಮಾಡಿದವರಿಗಷ್ಟೇ ಅನ್ವಯವಾಗದೆ, ಅವರ ಪಾಪಗಳು ಅವರ ಮಕ್ಕಳಿಗೂ ಬಡಿದವು. ಪ್ರಾಯಶಃ ಸದುದ್ದೇಶಗಳಲ್ಲಿ ಮೂಲ ಪಡೆದಿದ್ದ ಈ ಪದ್ಧತಿ ಒಂದು ಸಂಪ್ರದಾಯವಾಗಿ ಬಲಗೊಂಡಿತು ಮತ್ತು ಈ ಆಚರಣೆಗೆ . ಸ್ವಲ್ಪವೂ ಅರ್ಹವಲ್ಲದ ಹಾಗೂ ಅದಕ್ಕೂ ಕಡಿಮೆ ಸಮರ್ಥನೀಯವಾದ ಶಾಶ್ವತತೆಯನ್ನು ನೀಡುವಂತಹ ಶ್ಲೋಕಗಳು ಕೂಡ ನಮ್ಮ ಧರ್ಮಗ್ರಂಥಗಳೊಳಕ್ಕೆ ನುಸುಳಿದವು. ನನ್ನ ವಾದ ಸರಿಯೋ ಅಲ್ಲವೋ. ಅಸ್ಪೃಶ್ಯತೆಯಂತೂ ತರ್ಕಕ್ಕೆ, ಕ್ಷಮೆ, ದಯೆ ಅಥವಾ ಪ್ರೀತಿಯ ಮಾನವನ ಸಹಜ ಸ್ವಭಾವಕ್ಕೆ ವಿರುದ್ಧವಾದುದು. ಗೋವಿನ ಪೂಜೆಯನ್ನು ಸ್ಥಾಪಿಸುವ ಧರ್ಮವೊಂದು ಮಾನವವ್ಯಕ್ತಿಗಳ ಮೇಲೆ ಕ್ರೂರವಾದ ಮತ್ತು

ಅಮಾನವೀಯವಾದ ಬಹಿಷ್ಕಾರವನ್ನು ಪ್ರಾಯಶಃ ಅನುಮೋದಿಸಲಾರದು ಅಥವಾ ಸಮರ್ಥಿಸಲಾರದು. ದಲಿತವರ್ಗಗಳನ್ನು ತೊರೆಯುವುದಕ್ಕಿಂತ ನನ್ನನ್ನು ತುಂಡರಿಸಿಕೊಳ್ಳುವುದರಿಂದಲೇ ನನ್ನ ಮನಸ್ಸಿಗೆ ಹೆಚ್ಚಿನ ನೆಮ್ಮದಿ ದೊರೆಯುತ್ತದೆ. ತಮ್ಮ ಉದಾತ್ತ ಧರ್ಮವು ಅಸ್ಪೃಶ್ಯತೆಯ ಕಳಂಕವನ್ನು ಉಳಿಸಿಕೊಂಡಿರುವ ಹಿಂದೂಗಳು ತಮ್ಮ ಉದಾತ್ತ ಧರ್ಮ, ಅಸ್ಪೃಶ್ಯತೆಯ ಕಳಂಕವನ್ನು ಉಳಿಸಿಕೊಂಡು ಬಂದ ಅಪಖ್ಯಾತಿಗೆ ಅವಕಾಶ ನೀಡಿದಲ್ಲಿ ಅವರು ಸ್ವಾತಂತ್ರ್ಯಕ್ಕೆ ಎಂದಿಗೂ ಅರ್ಹರಾಗರು ಮತ್ತು ಅದನ್ನು ಪಡೆಯಲಾರರು. ಹಿಂದೂಧರ್ಮ ನನಗೆ ನನ್ನ ಪ್ರಾಣಕ್ಕಿಂತಲೂ ಹೆಚ್ಚು ಪ್ರಿಯವಾಗಿರುವುದರಿಂದ ಈ ಕಳಂಕ ನನಗೆ ಒಂದು ಹೊರಲಾಗದ ಹೊರೆಯಾಗಿದೆ. ನಮ್ಮ ಜನಾಂಗದ ಐದನೆಯ ಒಂದು ಭಾಗದಷ್ಟು ಜನರಿಗೆ ನಮ್ಮೆಲ್ಲರೊಡನೆ ಸಮಾನವಾಗಿ ಬೆರೆಯುವ ಹಕ್ಕನ್ನು ನಿರಾಕರಿಸುವ ಮೂಲಕ ನಾವು ದೇವರನ್ನೇ ನಿರಾಕರಿಸುವುದು ಬೇಡ.

*ಯಂಗ್ ಇಂಡಿಯಾ*, 6 ಅಕ್ಟೋಬರ್ 1921



# 5

# ಸನಾತನ ಹಿಂದೂ

[ಹಿಂದೂಧರ್ಮವನ್ನು ಕುರಿತ ತಮ್ಮ ವ್ಯಾಖ್ಯಾನವನ್ನು ಟೀಕಿಸಿದ ಪತ್ರಕರ್ತನೊಬ್ಬನಿಗೆ ಗಾಂಧೀಜಿ ಬರೆದರು]

ನಾನೊಬ್ಬ ಅಕ್ಷರನಿಷ್ಠನಲ್ಲ. ಆದ್ದರಿಂದ ಪ್ರಪಂಚದ ವಿವಿಧ ಧರ್ಮಗ್ರಂಥಗಳ ಭಾವವನ್ನು ಅರ್ಥಮಾಡಿಕೊಳ್ಳಲು ನಾನು ಪ್ರಯತ್ನಿಸುತ್ತೇನೆ. ವ್ಯಾಖ್ಯಾನಕ್ಕಾಗಿ ನಾನು ಈ ಧರ್ಮಗ್ರಂಥಗಳೇ ವಿಧಿಸಿರುವ ಸತ್ಯ ಅಹಿಂಸೆಗಳ ಪರಿಕ್ಷಾಸೂತ್ರವನ್ನು ಅನ್ವಯಿಸುತ್ತೇನೆ. ಆ ಸೂತ್ರಕ್ಕೆ ಅಸಂಗತವಾದುದನ್ನು ತಿರಸ್ಕರಿಸುತ್ತೇನೆ ಮತ್ತು ಅದಕ್ಕೆ ಸುಸಂಗತವಾದ ಎಲ್ಲವನ್ನೂ ಸ್ವೀಕರಿಸುತ್ತೇನೆ. ವೇದಗಳನ್ನು ಕಲಿಯುವ ಸಾಹಸ ಮಾಡಿದ್ದಕ್ಕಾಗಿ ಶೂದ್ರನೊಬ್ಬ ರಾಮಚಂದ್ರನಿಂದ ಶಿಕ್ಷೆಗೊಳಗಾದ ಕತೆಯನ್ನು ನಾನು ಪ್ರಕ್ಷಿಪ್ತವೆಂದು ನಿರಾಕರಿಸುತ್ತೇನೆ. ಏನೇ ಆಗಲಿ, ನಾನು ರಾಮನನ್ನು ಪೂಜಿಸುತ್ತೇನೆ. ಅವನು ನನ್ನ ಕಲ್ಪನೆಯ ಪರಿಪೂರ್ಣ ವ್ಯಕ್ತಿ, ಹೊಸ ಐತಿಹಾಸಿಕ ಆವಿಷ್ಕಾರಗಳು ಮತ್ತು ಸಂಶೋಧನೆಗಳು ಮುಂದುವರೆದಂತೆ ಜೀವನದ ಸಂಗತಿಗಳು ವ್ಯತ್ಯಾಸವಾಗಬಹುದಾದ ಒಬ್ಬ ಚಾರಿತ್ರಿಕ ವ್ಯಕ್ತಿ ಅವನಲ್ಲ. ತುಲಸಿದಾಸರಿಗೂ ಚರಿತ್ರೆಯ ರಾಮನಿಗೂ ಯಾವ ಸಂಬಂಧವೂ ಇಲ್ಲ. ಚಾರಿತ್ರಿಕ ಪರೀಕ್ಷೆಯಿಂದ ನಿರ್ಣಯಿಸಿದಾಗ, ಅವರ ರಾಮಾಯಣ ತಿಪ್ಪೆಗುಂಡಿಗೆ ತಕ್ಕುದಾಗಿರುತ್ತದೆ. ಒಂದು ಆಧ್ಯಾತ್ಮಿಕ ಅನುಭವವಾಗಿ ಅವರ ಗ್ರಂಥ, ಕೊನೆಗೆ ನನ್ನ ಮಟ್ಟಿಗಾದರೂ, ಅಸದೃಶವಾಗಿದೆ. ತುಲಸಿದಾಸರ ರಾಮಾಯಣ ಎಂದು ಪ್ರಕಟವಾಗಿರುವ ಅಷ್ಟೊಂದು ಆವೃತ್ತಿಗಳಲ್ಲಿ ಪ್ರತಿಯೊಂದು

ಪದವೂ ಪ್ರಮಾಣವೆಂದು ನಾನು ನಂಬಿಲ್ಲ. ನನ್ನನ್ನು ಮಂತ್ರಮುಗ್ಧನನ್ನಾಗಿ ಮಾಡುವುದು ಆ ಗ್ರಂಥದ ಉದ್ದಕ್ಕೂ ಹರಿಯುವ ಭಾವ. ಶೂದ್ರರಿಗೆ ವೇದಾಧ್ಯಯನವನ್ನು ನಿಷೇಧಿಸುವುದನ್ನು ನಾನೇ ಒಪ್ಪಲಾರೆ. ವಸ್ತುತಃ, ಸದ್ಯದಲ್ಲಿ, ನಾವು ದಾಸರಾಗಿರುವವರೆಗೆ ನಾವೆಲ್ಲರೂ ಪ್ರಧಾನವಾಗಿ ಶೂದ್ರರೇ. ಜ್ಞಾನ ಯಾವುದೇ ವರ್ಗದ ಅಥವಾ ವಿಭಾಗದ ಸವಲತ್ತಾಗಲಾರದು. ಆದರೆ ಪೂರ್ವಸಿದ್ಧತೆಗಳನ್ನು ಮಾಡಿಕೊಳ್ಳದವರು ಎತ್ತರದ ಪ್ರದೇಶಗಳಲ್ಲಿನ ವಿರಳ ವಾಯುಮಂಡಲದಲ್ಲಿ ಉಸಿರಾಡಲು ಪೂರ್ತಿ ಅಸಮರ್ಥರಾಗಿರುವಂತೆ ಅಥವಾ ಸರಳಗಣಿತದಲ್ಲಿ ಪೂರ್ವಶಿಕ್ಷಣವಿಲ್ಲದವರು ಪ್ರೌಢ ಜ್ಯಾಮಿತಿ ಅಥವಾ ಬೀಜಗಣಿತವನ್ನು ಅರ್ಥಮಾಡಿಕೊಳ್ಳಲು ಅಥವಾ ಅರಗಿಸಿಕೊಳ್ಳಲು ಅಸಮರ್ಥರಾಗಿರುವಂತೆ, ಪೂರ್ವಶಿಕ್ಷಣ ಪಡೆಯದಿದ್ದರೆ ಜನಕ್ಕೆ ಉನ್ನತ ಅಥವಾ ಸೂಕ್ಷ್ಮ ಸತ್ಯಗಳನ್ನು ಅಂತರ್ಗತಮಾಡಿಕೊಳ್ಳಲು ಎಷ್ಟು ಅಸಾಧ್ಯವಾಗುವುದನ್ನು ನಾನು ಕಲ್ಪಿಸಿಕೊಳ್ಳಬಲ್ಲೆ. ಕೊನೆಯದಾಗಿ, ನಾನು ಕೆಲವು ಆರೋಗ್ಯಕರ ಪದ್ಧತಿಗಳನ್ನು ನಂಬುತ್ತೇನೆ. ಗಾಯತ್ರಿಜಪದ ವಿಷಯದಲ್ಲಿ ಒಂದು ಸಂಪ್ರದಾಯವಿದೆ. ಅದನ್ನು ನಿಗದಿತ ವೇಳೆಗಳಲ್ಲಿ ಮಾತ್ರ ಮತ್ತು ವಿಹಿತ ರೀತಿಯಲ್ಲಿ ಸ್ನಾನಾದಿಗಳನ್ನು ಮಾಡಿದ ತರುವಾಯವೇ ಜಪಿಸಬೇಕು ಎನ್ನುವುದೇ ಆ ಸಂಪ್ರದಾಯ. ಈ ಸಂಪ್ರದಾಯಗಳನ್ನು ನಾನು ನಂಬುವುದರಿಂದ ಮತ್ತು ಅವುಗಳನ್ನು ಅನುಸರಿಸಲು ನನಗೆ ಸದಾ ಸಾಧ್ಯವಾಗದಿರುವುದರಿಂದ, ನಾನು ಕೆಲವು ವರ್ಷಗಳ ಹಿಂದಿನಿಂದ ಅರ್ವಾಚೀನ ಸಂತರನ್ನು ಅನುಸರಿಸಿದ್ದೇನೆ. ಆದ್ದರಿಂದ ನಾನು ಭಾಗವತದ ದ್ವಾದಶಾಕ್ಷರ ಮಂತ್ರ ಅಥವಾ ಅದಕ್ಕಿಂತ ಸರಳವಾದ ತುಲಸಿದಾಸರ ಮಂತ್ರ, ಗೀತೆ ಮತ್ತು ಇತರ ಗ್ರಂಥಗಳಿಂದ ಆಯ್ದ ಕೆಲವು ಭಾಗಗಳೂ ಹಾಗೂ ಕೆಲವು ಪ್ರಾಕೃತದ ಭಜನೆಗಳಿಂದ ತೃಪ್ತನಾಗಿದ್ದೇನೆ. ಇವು ನನ್ನ ಅನುದಿನದ ಆಹಾರ, ನನ್ನ ಗಾಯತ್ರಿ. ಪ್ರತಿದಿನ ನನಗೆ ಬೇಕಾಗುವ ಎಲ್ಲಾ ಶಾಂತಿ ಮತ್ತು ನೆಮ್ಮದಿಯನ್ನು ಅವು ನೀಡುತ್ತವೆ.

*ಯಂಗ್ ಇಂಡಿಯಾ*, 27 ಆಗಸ್ಟ್ 1925



# 6

# ಕೆಲವು ಆಕ್ಷೇಪಗಳಿಗೆ ಉತ್ತರ

ನಾನು ಎಲ್ಲೆಲ್ಲಿಯೂ ಚರಕವನ್ನು ನೋಡಲು ಇಚ್ಛಿಸುತ್ತೇನೆ, ಏಕೆಂದರೆ ನಾನು ಎಲ್ಲೆಲ್ಲಿಯೂ ದಿವಾಳಿತನವನ್ನು ನೋಡುತ್ತೇನೆ. ಅಸ್ಥಿಪಂಜರಗಳಂತಿರುವ ಭಾರತದ ಜನರಿಗೆ ಉಣಲು ಮತ್ತು ಹೊದೆಯಲು ದೊರೆಯಬೇಕು. ಅಲ್ಲಿಯವರೆಗೆ ಅವರಿಗೆ ಧರ್ಮದ ಅರ್ಥವಿಲ್ಲ. ಇಂದು ಅವರು ಪಶುಗಳಂತೆ ಬಾಳುತ್ತಿದ್ದಾರೆ ಮತ್ತು ಅದಕ್ಕೆ ನಾವು ಜವಾಬ್ದಾರರಾಗಿದ್ದೇವೆ. ಆದ್ದರಿಂದ ಚರಕ ನಮಗೊಂದು ಪ್ರಾಯಶ್ಚಿತ್ತ. ಅಸಹಾಯಕರ ಸೇವೆಯೇ ಧರ್ಮ. ದೇವರು ನಮಗೆ ಅಸಹಾಯಕರ ಮತ್ತು ದುಃಖಾರ್ತರ ರೂಪದಲ್ಲಿ ನಮಗೆ ತನ್ನನ್ನು ಪ್ರಕಟಿಸಿಕೊಳ್ಳುತ್ತಾನೆ. ಆದರೆ ನಾವು, ಹಣೆಯ ಮೇಲೆ ಲಾಂಛನಗಳನ್ನು ಧರಿಸಿದ್ದರೂ, ಅವರನ್ನು, ಎಂದರೆ ದೇವರನ್ನು ಗಮನಿಸುವುದಿಲ್ಲ. ದೇವರು ವೇದಗಳಲ್ಲಿ ಇದ್ದಾನೆ ಹಾಗೂ ಇಲ್ಲ. ವೇದಗಳ ಭಾವವನ್ನು ಗ್ರಹಿಸುವವನು ಅವುಗಳಲ್ಲಿ ದೇವರನ್ನು ಕಾಣುತ್ತಾನೆ. ವೇದಗಳ ಅಕ್ಷರಕ್ಕೆ ಜೋತುಬೀಳುವವನು ಒಬ್ಬ ವೇದೀಯ, ಒಬ್ಬ ಅಕ್ಷರನಿಷ್ಠ. ನರಸಿಂಹ ಮೆಹ್ತ ಜಪಮಾಲೆಯ ಪ್ರಶಂಸೆಯನ್ನು ಹಾಡಿರುವುದು ನಿಜ. ಹಾಗೆ ಮಾಡಿರುವ ಕಡೆ ಆ ಪ್ರಶಂಸೆ ಸರಿಯಾಗಿ ಅರ್ಹವಾಗಿದೆ. ಆದರೇ ನರಸಿಂಹ ಮೆಹ್ತ ಹೀಗೆ ಹಾಡಿದ್ದಾನೆ:

ತಿಲಕತುಲಸಿಗಳಿಂದ ಏನು ಪ್ರಯೋಜನ? ಜಪಸರ ಮತ್ತು
ನಾಮ ಜಪದಿಂದ ಏನು ಪ್ರಯೋಜನ? ವೇದದ ಶಾಬ್ದಿಕ
ವ್ಯಾಖ್ಯಾನದಿಂದ ಏನು ಪ್ರಯೋಜನ? ಅಕ್ಷರಗಳ

ಪಾಂಡಿತ್ಯದಿಂದ ಏನು ಪ್ರಯೋಜನ? ಇವೆಲ್ಲವೂ ಹೊಟ್ಟೆ ತುಂಬಿಸಲು ಸಾಧನಗಳು. ಪರಬ್ರಹ್ಮದ ಸಾಕ್ಷಾತ್ಕಾರಕ್ಕೆ ಸಹಾಯ ಮಾಡದಿದ್ದರೆ ಇವಕ್ಕೆಲ್ಲಾ ಏನೇನೂ ಬೆಲೆಯಿಲ್ಲ.

ಮುಸಲ್ಮಾನನು ತನ್ನ ತಸ್ಬಿಯ ಮಣಿಗಳನ್ನೂ, ಕ್ರೈಸ್ತನು ತನ್ನ ಜಪಸರದ ಮಣಿಗಳನ್ನೂ ಎಣಿಸುತ್ತಾನೆ. ಆದರೆ, ಉದಾಹರಣೆಗೆ, ಹಾವು ಕಚ್ಚಿ ಬಿದ್ದಿದ್ದವನೊಬ್ಬನ ಸಹಾಯಕ್ಕೆ ಧಾವಿಸಲು ಅವರ ತಸ್ಬಿ ಮತ್ತು ಜಪಸರ ಅಡ್ಡಿಪಡಿಸಿದ್ದಲ್ಲಿ ಅವರಿಬ್ಬರೂ ತಮ್ಮ ಧರ್ಮದಿಂದ ಚ್ಯುತರಾದವರನ್ನಾಗಿ ತಮ್ಮನ್ನು ಭಾವಿಸಿಕೊಳ್ಳುತ್ತಿದ್ದರು. ವೇದಗಳ ಬರಿಯ ಜ್ಞಾನ ನಮ್ಮ ಬ್ರಾಹ್ಮಣರನ್ನು ಆಧ್ಯಾತ್ಮಿಕ ಗುರುಗಳನ್ನಾಗಿ ಮಾಡಲಾರದು. ಹಾಗೆ ಮಾಡಿದ್ದಲ್ಲಿ, ಮ್ಯಾಕ್ಸ್ ಮುಲ್ಲರ ಒಬ್ಬ ಬ್ರಾಹ್ಮಣನಾಗುತ್ತಿದ್ದ. ಇಂದಿನ ಧರ್ಮವನ್ನು ಅರ್ಥಮಾಡಿಕೊಂಡಿರುವ ಬ್ರಾಹ್ಮಣನು ಖಂಡಿತವಾಗಿಯೂ ವೇದಾಧ್ಯಯನಕ್ಕೆ ಎರಡನೆಯ ಸ್ಥಾನವನ್ನು ಕೊಡುತ್ತಾನೆ, ಚರಕದ ಧರ್ಮವನ್ನು ಪ್ರಸಾರ ಮಾಡುತ್ತಾನೆ ಮತ್ತು ಉಪವಾಸದಿಂದಿರುವ ತನ್ನ ಲಕ್ಷಾಂತರ ದೇಶಬಾಂಧವರ ಹಸಿವನ್ನು ನೀಗಿಸುತ್ತಾನೆ. ಆಗ ಮಾತ್ರವೇ ಅವನು ವೇದಾಭ್ಯಾಸದಲ್ಲಿ ತನ್ಮಯನಾಗುತ್ತಾನೆ. ಇಲ್ಲದಿದ್ದರೆ ಅದುವರೆಗೆ ಹಾಗೆ ಆಗುವುದಿಲ್ಲ.

ನೂಲುವುದನ್ನು ನಾನು ಖಂಡಿತವಾಗಿಯೂ ಧಾರ್ಮಿಕ ಪಂಥಗಳ ಆಚರಣೆಗಿಂತಲೂ ಉತ್ತಮವಾದುದೆಂದು ಪರಿಗಣಿಸಿದ್ದೇನೆ. ಆದರೆ ಇದರ ಅರ್ಥ ಈ ಆಚರಣೆಯನ್ನು ಬಿಟ್ಟುಬಿಡಬೇಕು ಎಂದಲ್ಲ. ಎಲ್ಲಾ ಧರ್ಮಗಳ ಅನುಯಾಯಿಗಳೂ ಅನುಸರಿಸಬೇಕಾಗಿರುವ ಧರ್ಮವು ಆ ಧರ್ಮಗಳನ್ನು ಮೀರುತ್ತದೆ ಎಂದಷ್ಟೇ ನನ್ನ ಅರ್ಥ. ಆದ್ದರಿಂದ ಸೇವಾಭಾವದಿಂದ ರಾಟೆ ತಿರುಗಿಸಿದರೆ ಬ್ರಾಹ್ಮಣ ಉತ್ತಮ ಬ್ರಾಹ್ಮಣನಾಗುತ್ತಾನೆ, ಮುಸಲ್ಮಾನ ಉತ್ತಮ ಮುಸಲ್ಮಾನನಾಗುತ್ತಾನೆ, ವೈಷ್ಣವ ಉತ್ತಮ ವೈಷ್ಣವನಾಗುತ್ತಾನೆ ಎಂದು ನಾನು ಹೇಳುತ್ತೇನೆ.

ನಾನು ಹಾಸಿಗೆಯಲ್ಲಿ ಮಲಗಿರುವಾಗ ರಾಟೆ ತಿರುಗಿಸುವುದು ನನಗೆ ಸಾಧ್ಯವಾದಲ್ಲಿ ಮತ್ತು ಅದು ದೇವರ ಮೇಲೆ ನನ್ನ ಮನಸ್ಸನ್ನು ಕೇಂದ್ರೀಕರಿಸಲು ಸಹಾಯ ಮಾಡುತ್ತದೆ ಎಂದು ನನಗೆ ಅನಿಸಿದಲ್ಲಿ, ನಾನು ಖಂಡಿತವಾಗಿಯೂ ಜಪಸರವನ್ನು ಬದಿಗಿಟ್ಟು ರಾಟೆ ತಿರುಗಿಸುತ್ತೇನೆ. ರಾಟೆ ತಿರಗಿಸಲು ನನಗೆ ಶಕ್ತಿಯಿದ್ದು, ಮಣಿಗಳನ್ನು ಎಣಿಸುವುದು ಅಥವಾ ರಾಟೆ ತಿರುಗಿಸುವುದು ಇವುಗಳ ನಡುವೆ ಆಯ್ಕೆ ಮಾಡಬೇಕಾದಲ್ಲಿ ನಾನು ಬಡತನ ಹಾಗೂ ಉಪವಾಸ ದೇಶವನ್ನು ಗುಪ್ತವಾಗಿ ಬೆನ್ನಟ್ಟಿರುವುದನ್ನು ಕಾಣುತ್ತಿರುವವರೆಗೆ ಖಂಡಿತ

ವಾಗಿಯೂ ರಾಟೆಯ ಪರವಾಗಿ ತೀರ್ಮಾನಿಸುತ್ತೇನೆ ಮತ್ತು ಅದನ್ನೇ ನಾನು ನನ್ನ ಜಪಸರವನ್ನಾಗಿ ಮಾಡಿಕೊಳ್ಳುತ್ತೇನೆ. ರಾಮನಾಮದ ಆವರ್ತನೆ ಕೂಡ ಒಂದು ಅಡ್ಡಿಯಾಗುವಂತಹ ಕಾಲವನ್ನು ನಾನು ಎದುರುನೋಡುತ್ತೇನೆ. ರಾಮನು ಮಾತಿಗೂ ಮೀರಿದವನೆಂದು ನಾನು ಅರಿತಾಗ ಆ ಹೆಸರನ್ನು ಪುನರಾವರ್ತಿಸುವ ಅಗತ್ಯ ನನಗೆ ಇರುವುದಿಲ್ಲ. ಚರಕ, ಜಪಸರ ಮತ್ತು ರಾಮನಾಮ ನನಗೆ ಎಲ್ಲವೂ ಒಂದೇ ಗುರಿಗೆ ಸಾಧಕವಾಗಿವೆ. ಅವು ನನಗೆ ಸೇವಾಧರ್ಮವನ್ನು ಬೋಧಿಸುತ್ತವೆ. ಸೇವಾಧರ್ಮವನ್ನು ಆಚರಿಸದೆ ನಾನು ಅಹಿಂಸೆಯನ್ನು ಪಾಲಿಸಲಾರೆ. ಅಹಿಂಸಾಧರ್ಮವನ್ನು ಆಚರಿಸದೆ ನಾನು ಸತ್ಯವನ್ನು ಕಾಣಲಾರೆ. ಸತ್ಯಕ್ಕಿಂತ ಬೇರೆಯಾಗಿ ಧರ್ಮವಿಲ್ಲ. ಸತ್ಯವೇ ರಾಮ, ನಾರಾಯಣ, ಈಶ್ವರ, ಖುದಾ, ಅಲ್ಲಾ, ಗಾಡ್. (ನರಸಿಂಹ ಮೆಹ್ತ ಹೇಳುವಂತೆ: "ಚಿನ್ನವನ್ನು ತಟ್ಟಿದಾಗ, ವಿಭಿನ್ನ ಹೆಸರುಗಳ ವಿಭನ್ನ ರೂಪಗಳು ಮೂಡಿಬರುತ್ತವೆ. ತಟ್ಟಿದ ವಿಭಿನ್ನ ರೂಪಗಳು ವಿಭಿನ್ನ ನಾಮರೂಪಗಳಿಗೆ ಕಾರಣವಾಗುತ್ತವೆ. ಆದರೆ ಆತ್ಯಂತಿಕವಾಗಿ ಅದೆಲ್ಲವೂ ಚಿನ್ನವೇ.")

*ಯಂಗ್ ಇಂಡಿಯಾ*, 14 ಆಗಸ್ಟ್ 1924



# 7

# ಕಾಂಗ್ರೆಸ್ಸು ಮತ್ತು ತರುವಾಯ

ಧರ್ಮದ ಹೆಸರಿನಲ್ಲಿ ನಾವು ಹಿಂದೂಗಳು ಬಾಹ್ಯಾಚರಣೆಗಳನ್ನು ಅಂಧಶ್ರದ್ಧೆಯ ಒಂದು ವಿಷಯವನ್ನಾಗಿ ಮಾಡಿಬಿಟ್ಟಿದ್ದೇವೆ ಮತ್ತು ಧರ್ಮವನ್ನು ಕೇವಲ ತಿನ್ನುವ ಮತ್ತು ಕುಡಿಯುವ ವಿಷಯವನ್ನಾಗಿಸಿ ಅದನ್ನು ಕೆಳದರ್ಜೆಗೆ ಇಳಿಸಿದ್ದೇವೆ. ಬ್ರಾಹ್ಮಣಧರ್ಮವು ಜ್ಞಾನದ ಪ್ರಕಾಶದಿಂದ ಕೂಡಿದ ತನ್ನ ಸ್ವಾರ್ಥತ್ಯಾಗ, ಆಂತರಿಕ ಪರಿಶುದ್ಧಿ ಮತ್ತು ಉಗ್ರ ತಪೋನಿಷ್ಠೆಗಳಿಂದಾಗಿ ಅದರ ಅಸದೃಶ ಸ್ಥಾನವನ್ನು ಪಡೆದಿದೆ. ಹಿಂದೂಗಳು ಆಹಾರಗಳ ಮತ್ತು ಮಾನವಸಂಪರ್ಕಗಳ ಆಧ್ಯಾತ್ಮಿಕ ಪರಿಣಾಮಗಳಿಗೆ ಅನುಚಿತ ಪ್ರಾಮುಖ್ಯ ನೀಡಿದಲ್ಲಿ ಅವರು ದುರ್ಗತಿಗೆ ಈಡಾಗುತ್ತಾರೆ. ಒಳಗಿನ ಕ್ಲೇಶಗಳ ಮತ್ತು ಪ್ರಲೋಭನೆಗಳ ನಡುವೆ ಸಿಕ್ಕಿಬಿದ್ದು ಮತ್ತು ಅತ್ಯಂತ ಅಸ್ಪೃಶ್ಯವಾದ ಹಾಗೂ ಅತ್ಯಂತ ನೀಚವಾದ ಆಲೋಚನಾಪ್ರವಾಹಗಳು ಸೋಕಿ ಮಲಿನರಾದ ನಾವು, ನಮ್ಮ ದುರಹಂಕಾರದಲ್ಲಿ, ನಮಗಿಂತ ಕೀಳೂ ಎಂದು ನಾವು ಅನೇಕವೇಳೆ ಅಜ್ಞಾನದಿಂದ ಮತ್ತು ಅದಕ್ಕೂ ಹೆಚ್ಚಿನ ವೇಳೆ ಸೊಕ್ಕಿನಿಂದ ಭಾವಿಸುವ ಜನದ ಜೊತೆಯ ಸಂಸ್ಪರ್ಶದ ಪ್ರಭಾವವನ್ನು ಅತಿಶಯಿಸದೆ ಇರೋಣ. ಸರ್ವಶಕ್ತನ ಸಿಂಹಾಸನದ ಎದುರು ನಮ್ಮ ಬಗ್ಗೆ ತೀರ್ಮಾನವಾಗುವುದು ನಾವು ಏನನ್ನು ತಿಂದಿದ್ದೇವೆ ಅಥವಾ ಯಾರು ನಮ್ಮನ್ನು ಮುಟ್ಟಿದ್ದಾರೆ ಎಂಬುದರ ಮೇಲಿಲ್ಲ, ಆದರೆ ನಾವು ಯಾರಿಗೆ ಸೇವೆ ಮಾಡಿದ್ದೇವೆ ಮತ್ತು ಹೇಗೆ ಮಾಡಿದ್ದೇವೆ ಎನ್ನುವುದರ ಮೇಲೆ. ಕಷ್ಟದಲ್ಲಿರುವ ಒಬ್ಬನೇ ಒಬ್ಬ ಮನುಷ್ಯನಿಗೆ ನಾವು ಸೇವೆ ಸಲ್ಲಿಸಿದರೂ ಸಾಕು, ದೇವರ ದೃಷ್ಟಿಯಲ್ಲಿ ನಾವು ಅನುಗ್ರಹಕ್ಕೆ ಪಾತ್ರರಾಗುತ್ತೇವೆ. ದುಷ್ಟ

ಸಂಪರ್ಕವನ್ನು ನಾವು ದೂರಮಾಡಬೇಕಾಗಿರುವಂತೆಯೇ, ಕೆಟ್ಟ ಮತ್ತು ಉದ್ರೇಕಿಸುವ ಅಥವಾ ಅಶುದ್ಧ ಆಹಾರಗಳನ್ನು ನಾವು ತ್ಯಜಿಸಬೇಕು. ಆದರೆ ಈ ಆಚರಣೆಗಳಿಗೆ ಅವುಗಳ ಪ್ರಾಮುಖ್ಯಕ್ಕೆ ಮಿತಿಮೀರಿದ ಸ್ಥಾನವನ್ನು ಕೊಡಬಾರದು. ಕೆಲವು ಆಹಾರಗಳ ವರ್ಜನೆಯನ್ನು ನಾವು ಮೋಸ, ಆಷಾಢಭೂತಿತನ ಮತ್ತು ಅವಕ್ಕೂ ಮೀರಿದ ದುರ್ನಡತೆಗಳನ್ನು ಮುಚ್ಚಿಕೊಳ್ಳುವ ಒಂದು ಕವಚವಾಗಿ ಬಳಸಲು ಪ್ರಯತ್ನಿಸಕೂಡದು. ಅವನ ಸ್ಪರ್ಶ ನಮ್ಮ ಆಧ್ಯಾತ್ಮಿಕ ಬೆಳವಣಿಗೆಗೆ ಹಾನಿ ಮಾಡಬಹುದೆಂಬ ಕಾರಣಕ್ಕಾಗಿ ನಾವು ಒಬ್ಬ ಪತಿತ ಅಥವಾ ಅಶುದ್ಧ ಸಹಮಾನವನಿಗೆ ಸೇವೆ ಮಾಡಲು ನಿರಾಕರಿಸಲಾಗದು.

*ಯಂಗ್ ಇಂಡಿಯಾ*, 5 ಜನವರಿ 1992



# 8

# ನನ್ನ ಜೀವನಕರ್ತವ್ಯ

ಪ್ರವಾದಿಗಳ ಕುಲದ ಜೊತೆಗೆ ಒಂದೇ ಉಸಿರಿನಲ್ಲಿ ಉಚ್ಚರಿಸಲು ನಾನು ಯೋಗ್ಯನಾಗಿದ್ದೇನೆಂದು ನಾನೇ ಪರಿಗಣಿಸುವುದಿಲ್ಲ. ನಾನೊಬ್ಬ ವಿನಮ್ರ ಸತ್ಯಾನ್ವೇಷಿ. ಈ ಜೀವಿತದಲ್ಲಿಯೇ ಮೋಕ್ಷವನ್ನು ಪಡೆಯಬೇಕೆಂದು ನಾನು ತವಕ ಪಡುತ್ತೇನೆ. ನನ್ನ ರಾಷ್ಟ್ರಸೇವೆಯು ದೇಹದ ಬಂಧನದಿಂದ ನನ್ನ ಆತ್ಮವನ್ನು ಮುಕ್ತಗೊಳಿಸುವ ನನ್ನ ತರಪೇತಿನ ಒಂದು ಅಂಗ. ಹೀಗೆ ಪರಿಗಣಿಸಿದಾಗ, ನನ್ನ ಸೇವೆಯನ್ನು ಶುದ್ಧ ಸ್ವಾರ್ಥ ಎಂದು ಎಣಿಸಬಹುದು. ಭೂಮಿಯ ಮೇಲಣ ನಶ್ವರ ರಾಜ್ಯಕ್ಕಾಗಿ ನನಗೆ ಆಸೆಯಿಲ್ಲ. ನಾನು ಸ್ವರ್ಗದ ರಾಜ್ಯ, ಅಂದರೆ ಮೋಕ್ಷಕ್ಕಾಗಿ ಶ್ರಮಿಸುತ್ತಿದ್ದೇನೆ. ನನ್ನ ಗುರಿಯನ್ನು ಸಾಧಿಸಲು ನಾನು ಗುಹೆಯೊಂದರ ಆಶ್ರಯವನ್ನು ಅರಸುವ ಅಗತ್ಯವಿಲ್ಲ. ನಾನು ಅದನ್ನು ಕೇವಲ ಅರಿತುಕೊಳ್ಳಬಹುದಾದರೆ, ನಾನು ಗುಹೆಯೊಂದನ್ನು ನನ್ನೊಡನೆ ಒಯ್ಯುತ್ತಿರುತ್ತೇನೆ. ಗುಹಾವಾಸಿಯೊಬ್ಬ ಗಾಳಿಯಲ್ಲಿ ಅರಮನೆಗಳನ್ನು ಕಟ್ಟಬಲ್ಲ. ಆದರೆ ಜನಕನಂಥ ಅರಮನೆವಾಸಿಗೆ ಕಟ್ಟಲು ಅರಮನೆಗಳೇ ಇಲ್ಲ. ಆಲೋಚನೆಯ ರೆಕ್ಕೆಗಳ ಮೇಲೆ ಪ್ರಪಂಚದ ಸುತ್ತ ಹಾರಾಡುವ ಗುಹಾವಾಸಿಗೆ ಸ್ವಲ್ಪವೂ ಶಾಂತಿಯಿಲ್ಲ. ವೈಭವ ಮತ್ತು ಆಡಂಬರಗಳ ನಡುವೆ ಜೀವಿಸುತ್ತಿದ್ದರೂ ಒಬ್ಬ ಜನಕನು ಅರಿವಿಗೂ ಮೀರಿದ ಶಾಂತಿಯನ್ನು ಹೊಂದಿರಬಹುದು. ನನಗೆ ಸ್ವರ್ಗದ ಹಾದಿಯು ನನ್ನ ದೇಶದ ಮತ್ತು ಆ ಮೂಲಕ ಮಾನವಜನತೆಯ ಸೇವೆಯಲ್ಲಿ ಅವಿರತ ದುಡಿಮೆಯ ಮೂಲಕ ಸಾಗುತ್ತದೆ. ಜೀವಿಸಿರುವ ಪ್ರತಿಯೊಂದರೊಡನೆಯೂ ನಾನು ತಾದಾತ್ಮ್ಯ ಪಡೆಯಲು ಅಪೇಕ್ಷಿಸುತ್ತೇನೆ.

ಗೀತೆಯ ಭಾಷೆಯಲ್ಲಿ, ನಾನು ಶತ್ರು ಮತ್ತು ಮಿತ್ರ ಇಬ್ಬರೊಡನೆಯೂ ಶಾಂತಿಯಿಂದ ಬಾಳಬೇಕೆಂದಿದ್ದೇನೆ. ಆದ್ದರಿಂದ ಒಬ್ಬ ಮುಸಲ್ಮಾನ ಅಥವಾ ಒಬ್ಬ ಕ್ರೈಸ್ತ ಅಥವಾ ಒಬ್ಬ ಹಿಂದೂ ನನ್ನನ್ನು ನಿಕೃಷ್ಟವಾಗಿ ಕಾಣಬಹುದು ಮತ್ತು ನನ್ನನ್ನು ದ್ವೇಷಿಸಬಹುದು. ನನ್ನನ್ನು ದ್ವೇಷಿಸಿದರೂ ನನ್ನ ಹೆಂಡತಿ ಅಥವಾ ಮಗನನ್ನು ನಾನು ಪ್ರೀತಿಸುವಂತೆಯೇ ಅವನನ್ನು ಪ್ರೀತಿಸಲು ಮತ್ತು ಅವನ ಸೇವೆಮಾಡಲು ನಾನು ಬಯಸುತ್ತೇನೆ. ಆದ್ದರಿಂದ ನನ್ನ ದೇಶಭಕ್ತಿ ನನಗೆ ಶಾಶ್ವತ ಸ್ವಾತಂತ್ರ್ಯದ ಮತ್ತು ಶಾಂತಿಯ ನಾಡಿನೆಡೆಗೆ ನಾನು ಮಾಡುತ್ತಿರುವ ಪ್ರಯಾಣದಲ್ಲಿನ ಒಂದು ಹಂತವಾಗಿದೆ. ನನಗೆ ಧರ್ಮದಿಂದ ರಹಿತವಾದ ರಾಜಕೀಯ ಯಾವುದೂ ಇಲ್ಲ ಎನ್ನುವುದು ಈ ರೀತಿಯಲ್ಲಿ ಗೊತ್ತಾಗುತ್ತದೆ. ರಾಜಕೀಯವು ಧರ್ಮಕ್ಕೆ ಉಪಕಾರಕವಾಗಿದೆ. ಧರ್ಮರಹಿತವಾದ ರಾಜಕೀಯವು ಒಂದು ಸಾವಿನ ಬಲೆ, ಏಕೆಂದರೆ ಅದು ಆತ್ಮವನ್ನು ಕೊಲ್ಲುತ್ತದೆ.

*ಯಂಗ್ ಇಂಡಿಯಾ*, 3 ಏಪ್ರಿಲ್ 1924



# 9

# ಹಿಂದೂ–ಮುಸ್ಲಿಂ ವೈಷಮ್ಯ : ಅದಕ್ಕೆ ಕಾರಣಗಳು ಮತ್ತು ಪರಿಹಾರ

ಕ್ರೈಸ್ತಮತದಲ್ಲಿ ಅಥವಾ ಸ್ವಲ್ಪ ಕಡಿಮೆಯಾಗಿ ಇಸ್ಲಾಂನಲ್ಲಿ ಅರ್ಥೈಸಿಕೊಂಡಿರುವಂತೆ ಮತಾಂತರ ಎನ್ನುವಂಥದ್ದು ಒಂದು ಹಿಂದೂಮತದಲ್ಲಿ ಇಲ್ಲ ಎಂದು ನನ್ನ ಅಭಿಪ್ರಾಯ. ಆರ್ಯಸಮಾಜವು ತನ್ನ ಪ್ರಚಾರವನ್ನು ಯೋಜಿಸುವಲ್ಲಿ ಕ್ರೈಸ್ತರನ್ನು ಅನುಕರಿಸಿದೆ ಎಂದು ನನಗನಿಸುತ್ತದೆ. ಈ ನವೀನ ವಿಧಾನ ನನಗೆ ಹಿಡಿಸುವುದಿಲ್ಲ. ಅದು ಒಳ್ಳೆಯದಕ್ಕಿಂತ ಹೆಚ್ಚು ಕೆಟ್ಟುದನ್ನೇ ಮಾಡಿದೆ. ಶುದ್ಧವಾಗಿ ಹೃದಯಕ್ಕೆ ಸಂಬಂಧಿಸಿದ ವಿಷಯ ಮತ್ತು ಸೃಷ್ಟಿಕರ್ತನಿಗೂ ವ್ಯಕ್ತಿಗೂ ನಡುವಿನದು ಎಂದು ಪರಿಗಣಿತವಾಗಿದ್ದರೂ, ಅದು ಸ್ವಾರ್ಥಪ್ರವೃತ್ತಿಗೆ ಒಂದು ಆಕರ್ಷಣೆಯಾಗುವ ಸ್ಥಿತಿಗೆ ಇಳಿದುಬಿಟ್ಟಿದೆ. ಆರ್ಯಸಮಾಜದ ಪ್ರಚಾರಕನೊಬ್ಬ ಇತರ ಧರ್ಮಗಳನ್ನು ಹಳಿಯುವಾಗ ಇರುವಷ್ಟು ಸಂತೋಷದಿಂದ ಇನ್ನಾವಾಗಲೂ ಇರುವುದಿಲ್ಲ. ಎಲ್ಲ ಧರ್ಮಗಳು ಹೆಚ್ಚುಕಡಿಮೆ ಸತ್ಯವಾಗಿವೆ ಎಂದು ನನ್ನ ಹಿಂದೂ ಪ್ರವೃತ್ತಿ ನನಗೆ ಹೇಳುತ್ತದೆ. ಎಲ್ಲವೂ ಒಬ್ಬನೇ ದೇವರಿಂದ ಹೊರಡುತ್ತವೆ, ಆದರೆ ಎಲ್ಲವೂ ಅನಿರ್ದುಷ್ಟ ಮಾನವ ಸಾಧನಗಳು. ನಿಜವಾದ ಶುದ್ಧಿಚಳವಳಿಯು ಪ್ರತಿಯೊಬ್ಬನೂ ತನ್ನ ಸ್ವಂತ ಧರ್ಮದಲ್ಲಿ ಪರಿಪೂರ್ಣತೆ ತಲುಪಲು ಮಾಡುವ ಪ್ರಯತ್ನವನ್ನು ಒಳಗೊಂಡಿರಬೇಕು. ಅಂತಹ ಯೋಜನೆಯಲ್ಲಿ ಚಾರಿತ್ರ್ಯವು ಏಕಮಾತ್ರ ಪರೀಕ್ಷಾಸಾಧನವಾಗುತ್ತದೆ. ಅದೊಂದು ನೈತಿಕ ಅಭಿವೃದ್ಧಿಯಾಗದಿದ್ದಲ್ಲಿ, ಒಂದು ಅಂಕಣದಿಂದ ಇನ್ನೊಂದಕ್ಕೆ ಹಾದುಹೋಗುವುದರ ಪ್ರಯೋಜನ ಏನು? ನನ್ನ ಧರ್ಮದಲ್ಲಿ ಇರುವವರು ಪ್ರತಿದಿನವೂ ತಮ್ಮ ಕಾರ್ಯಗಳಿಂದ

ದೇವರನ್ನು ನಿರಾಕರಿಸುತ್ತಿರುವಾಗ, ನಾನು ಇತರರನ್ನು ದೇವರ ಸೇವೆಗೆ ಪರಿವರ್ತಿಸಲು (ಏಕೆಂದರೆ ಶುದ್ಧಿಯ ಅಥವಾ ತಬ್ಲಿಗ್‌ನ ಸೂಚನೆ ಇದಾಗಿರಬೇಕು) ಪ್ರಯತ್ನಿಸುವ ಅರ್ಥವೇನು? "ಅಯ್ಯಾ ವೈದ್ಯ, ನಿನ್ನನ್ನು ನೀನು ಗುಣಪಡಿಸಿಕೋ" ಎನ್ನುವುದು ಲೌಕಿಕ ವಿಷಯಗಳಿಗಿಂತಲೂ ಹೆಚ್ಚಾಗಿ ಧಾರ್ಮಿಕ ವಿಷಯಗಳಲ್ಲಿ ಸತ್ಯವಾಗಿರುತ್ತದೆ. ಆದರೆ ಇವು ನನ್ನ ಅಭಿಪ್ರಾಯಗಳು. ಆರ್ಯಸಮಾಜಿಗಳು ತಮ್ಮ ಅಂತರ್ವಾಣಿಯಿಂದ ತಮಗೊಂದು ಕರೆ ಬಂದಿದೆಯೆಂದು ಭಾವಿಸಿದರೆ, ಚಳವಳಿ ನಡೆಸಲು ಅವರಿಗೆ ಸಂಪೂರ್ಣ ಹಕ್ಕಿದೆ. ಅಂತಹ ಜ್ವಲಂತವಾದ ಕರೆ ಕಾಲದ ಯಾವುದೇ ಮಿತಿಯನ್ನು, ಅನುಭವದ ಯಾವುದೇ ಅಡೆತಡೆಗಳನ್ನು ಪರಗಣಿಸುವುದಿಲ್ಲ. ಒಳಗಿನ ಕರೆಯೊಂದಕ್ಕೆ ವಿಧೇಯನಾಗಿ ಒಬ್ಬ ಆರ್ಯಸಮಾಜದ ಉಪದೇಶಕ ಅಥವಾ ಒಬ್ಬ ಮುಸಲ್ಮಾನ ಉಪದೇಶಕ ತನ್ನ ಧರ್ಮವನ್ನು ಉಪದೇಶ ಮಾಡುವುದರಿಂದ ಹಿಂದೂ ಮುಸ್ಲಿಂ ಐಕ್ಯತೆಗೆ ಅಪಾಯವುಂಟಾಗುವುದಾದರೆ, ಆ ಐಕ್ಯತೆ ಕೇವಲ ಚರ್ಮದಾಳದ್ದು. ಅಂಥ ಚಳವಳಿಗಳಿಂದ ನಾವೇಕೆ ಪ್ರಕ್ಷುಬ್ಧರಾಗಬೇಕು? ಆದರೆ ಅವು ಪ್ರಾಮಾಣಿಕ ಆಗಿರಬೇಕು. ಮಲ್ಕನರು ಹಿಂದೂಧರ್ಮಕ್ಕೆ ಮರಳಲು ಅಪೇಕ್ಷಿಸಿದ್ದರೆ, ಅವರಿಗೆ ಬೇಕೆನಿಸಿದಾಗ ಹಾಗೆ ಮಾಡಲು ಸಂಪೂರ್ಣ ಹಕ್ಕಿತ್ತು. ಆದರೆ ಇತರ ಧರ್ಮಗಳನ್ನು ಹಳಿಯುವ ಯಾವ ಪ್ರಚಾರಕ್ಕೂ ಅವಕಾಶಕೊಡಕೂಡದು. ಏಕೆಂದರೆ ಅದು ಸಹಿಷ್ಣುತೆಯ ನಿರಾಕರಣೆಯಾಗುತ್ತದೆ. ಅಂತಹ ಪ್ರಚಾರದ ಬಗ್ಗೆ ವರ್ತಿಸುವ ಅತ್ಯುತ್ತಮ ವಿಧಾನವೆಂದರೆ ಅದನ್ನು ಸಾರ್ವಜನಿಕವಾಗಿ ಖಂಡಿಸುವುದು.

*ಯಂಗ್ ಇಂಡಿಯಾ*, 29 ಮೇ 1924



# 10

# ಹಿಂದೂಗಳು ಏನು ಮಾಡಬಹುದು?

ಭಾರತದ ಬಹುಭಾಗದಷ್ಟು ಮುಸ್ಲಿಮರು ಮತ್ತು ಹಿಂದೂಗಳು ಒಂದೇ 'ಬುಡಕಟ್ಟಿಗೆ' ಸೇರಿದ್ದರೂ, ಧಾರ್ಮಿಕ ಪರಿಸರ ಅವರನ್ನು ಭಿನ್ನರನ್ನಾಗಿ ಮಾಡಿದೆ. ಚಿಂತನೆಯು ಮನುಷ್ಯನ ರೂಪಾಕೃತಿಗಳನ್ನು ಮತ್ತು ಚಾರಿತ್ರ್ಯವನ್ನು ಮಾರ್ಪಡಿಸುತ್ತದೆ ಎಂಬುದನ್ನು ನಾನು ನಂಬುತ್ತೇನೆ ಹಾಗೂ ಹಾಗೆ ಮಾಡುವುದನ್ನು ಗಮನಿಸಿಯೂ ಇದ್ದೇನೆ. ಸಿಖ್ಖರು ಈ ಸಂಗತಿಯ ಅತ್ಯಂತ ಇತ್ತೀಚಿನ ಉದಾಹರಣೆ. ಮುಸಲ್ಮಾನನು ಸಾಮಾನ್ಯವಾಗಿ ಅಲ್ಪಸಂಖ್ಯಾತರಲ್ಲಿ ಸೇರಿರುವುದರಿಂದ ಒಂದು ವರ್ಗವಾಗಿಯೇ ಒಬ್ಬ ಗೂಂಡಾವಾಗಿ ಬೆಳೆದಿದ್ದಾನೆ. ಜೊತೆಗೆ ಹೊಸ ಸಂಪ್ರದಾಯಗಳಿಗೆ ಅಧಿಕಾರಿಯಾಗಿ ಕೊಂಚಮಟ್ಟಿಗೆ ಹೊಸದಾದ ಜೀವನಪದ್ಧತಿಯೊಂದರ ಜೀವಂತ ಸತ್ವವನ್ನು ಪ್ರದರ್ಶಿಸುತ್ತಾನೆ. ನನ್ನ ಅಭಿಪ್ರಾಯದಲ್ಲಿ ಅಹಿಂಸೆಯು ಕುರಾನಿನಲ್ಲಿ ಒಂದು ಪ್ರಧಾನ ಸ್ಥಾನ ಹೊಂದಿದ್ದರೂ, ಸಾವಿರದ ಮುನ್ನೂರು ವರ್ಷಗಳ ಸಾಮ್ರಾಜ್ಯಶಾಹಿ ವಿಸ್ತರಣವು ಮುಸಲ್ಮಾನರನ್ನು ಒಂದು ಸಮುದಾಯವಾಗಿ ಹೋರಾಟಗಾರರನ್ನಾಗಿ ಮಾಡಿದೆ. ಆದ್ದರಿಂದ ಅವರು ಆಕ್ರಮಣಕಾರಿಗಳಾಗಿದ್ದಾರೆ. ಗೂಂಡಾಗಿರಿಯು ಆಕ್ರಮಣಕಾರಿ ಮನೋಭಾವದ ಸಹಜವಾದ ಕೆಟ್ಟ ಬೆಳವಣಿಗೆ. ಹಿಂದೂವಿಗೆ ಯುಗಾಂತರಗಳಷ್ಟು ಹಳೆಯ ನಾಗರಿಕತೆಯಿದೆ. ಅವನು ಮುಖ್ಯವಾಗಿ ಅಹಿಂಸಾತ್ಮಕ. ಇತ್ತೀಚಿನ ಎರಡು ನಾಗರಿಕತೆಗಳು ಇನ್ನೂ ಅನುಭವಿಸುತ್ತಿರುವ ಅನುಭವಗಳನ್ನು ಅವನ ನಾಗರಿಕತೆ ಅನುಭವಿಸಿ ಆಗಿದೆ. ಸಾಮ್ರಾಜ್ಯಶಾಹಿ ಎಂಬ ಪದದ ಆಧುನಿಕ ಅರ್ಥದಲ್ಲಿ ಹಿಂದೂ ಧರ್ಮವು ಎಂದಾದರೂ ಸಾಮ್ರಾಜ್ಯಶಾಹಿ ಆಗಿದ್ದಲ್ಲಿ,

ಅದು ತನ್ನ ಸಾಮ್ರಾಜ್ಯಶಾಹಿ ಮುಗಿಸಿ ಉಳಿದಿದೆ ಮತ್ತು ಉದ್ದೇಶಪೂರ್ವಕ ವಾಗಿಯೋ ಸ್ವಾಭಾವಿಕ ಕ್ರಮದಲ್ಲೋ ಅದನ್ನು ತ್ಯಜಿಸಿದೆ. ಅಹಿಂಸಾಮನೋ ಭಾವದ ಪ್ರಾಧಾನ್ಯವು ಶಸ್ತ್ರಾಸ್ತ್ರಗಳ ಬಳಕೆಯನ್ನು ಒಂದು ಸಣ್ಣ ಅಲ್ಪಸಂಖ್ಯೆಯ ವರ್ಗಕ್ಕೆ ಮಿತಿಗೊಳಿಸಿದೆ. ಈ ವರ್ಗವು ಬಹಳ ಆಧ್ಯಾತ್ಮಿಕ, ವಿದ್ಯಾವಂತ ಹಾಗೂ ಸ್ವಾರ್ಥರಹಿತವಾಗಿರುವ ನಾಗರಿಕ ಅಧಿಕಾರವೊಂದಕ್ಕೆ ಯಾವಾಗಲೂ ಅಧೀನವಾಗಿರಬೇಕು. ಆದ್ದರಿಂದ ಒಂದು ಸಮುದಾಯವಾಗಿ ಹಿಂದೂಗಳು ಹೋರಾಟಕ್ಕೆ ಸಜ್ಜಾಗಿರುವವರಲ್ಲ. ಆದರೆ ತಮ್ಮ ಆಧ್ಯಾತ್ಮಿಕ ತರಪೇತನ್ನು ಉಳಿಸಿಕೊಳ್ಳದೆ ಇರುವುದರಿಂದ, ಅವರು ಶಸ್ತ್ರಗಳಿಗೆ ಪರಿಣಾಮಕಾರಿಯಾದ ಬದಲಿಯ ಬಳಕೆಯನ್ನು ಮರೆತುಬಿಟ್ಟಿದ್ದಾರೆ. ಶಸ್ತ್ರಗಳ ಬಳಕೆಯನ್ನು ಅರಿಯದೆ ಮತ್ತು ಅವುಗಳ ಬಗ್ಗೆ ಸಹಜವಾದ ಒಲವಿರದೆ, ಅವರು ಅಂಜುಬುರುಕುತನದ ಅಥವಾ ಹೇಡಿತನದ ಮಟ್ಟಕ್ಕೆ ಸಾಧುವಾಗಿಬಿಟ್ಟಿದ್ದಾರೆ. ಆದ್ದರಿಂದ ಈ ದುರ್ಗುಣ ಸೌಮ್ಯತನದ ಒಂದು ಸಹಜವಾದ ದುಷ್ಟ ಬೆಳವಣಿಗೆ. ಈ ಅಭಿಪ್ರಾಯ ತಳೆದು ನಾನು ಹಿಂದೂಗಳ ಪ್ರತ್ಯೇಕತೆಯು ಹಿಂದೂ ಅಂಜುಬುರುಕುತನಕ್ಕೆ ಬಹಳ ಸಂಬಂಧಿಸಿದೆ ಎಂದು ಭಾವಿಸುವುದಿಲ್ಲ. ಆದ್ದರಿಂದಲೇ ಆತ್ಮರಕ್ಷಣೆಯ ಸಾಧನವಾಗಿ ಅಖಾಡಗಳಲ್ಲಿನ ನನ್ನ ಅಪನಂಬಿಕೆ. ಶಾರೀರಿಕ ಅಭಿವೃದ್ಧಿಗಾಗಿ ನಾನು ಅವುಗಳಿಗೆ ಬೆಲೆಕೊಡುತ್ತೇನೆ, ಆದರೆ ಆತ್ಮರಕ್ಷಣೆಗೆ ಅತ್ಮಸಂಸ್ಕಾರವನ್ನು ಪೂರ್ವಸ್ಥಿತಿಗೆ ತರಲು ಬಯಸುತ್ತೇನೆ. ಅತ್ಮಪರಿಶುದ್ಧಿಯೇ ಶ್ರೇಷ್ಠವಾದ ಹಾಗೂ ಅತ್ಯಂತ ಸ್ಥಿರವಾದ ಆತ್ಮರಕ್ಷಣೆ. ಇಂದು ನಮ್ಮನ್ನು ಕಾಡುವ ಗೊಡ್ಡು ಬೆದರಿಕೆಗಳ ಕಾರಣದಿಂದಾಗಿ ನಾನು ಉದ್ರೇಕಕ್ಕೆ ಒಳಗಾಗಲಾರೆ. ಹಿಂದೂಗಳು ಕೇವಲ ತಮ್ಮಲ್ಲಿ ನಂಬಿಕೆಯಿಟ್ಟು ತಮ್ಮ ಸಂಪ್ರದಾಯಗಳಿಗೆ ಅನುಸಾರವಾಗಿ ಕೆಲಸಮಾಡಿದಲ್ಲಿ, ಗೂಂಡಾಗಿರಿಗೆ ಹೆದರಲು ಅವರಿಗೆ ಯಾವುದೇ ಕಾರಣವಿರುವುದಿಲ್ಲ. ನಿಜವಾದ ಆಧ್ಯಾತ್ಮಿಕ ಶಿಕ್ಷಣವನ್ನು ಅವರು ಪುನರಾರಂಭಿಸುವ ಕ್ಷಣವೇ ಮುಸಲ್ಮಾನನು ಪ್ರತಿಸ್ಪಂದಿಸುತ್ತಾನೆ. ಅವನಿಗೆ ಹಾಗೆ ಮಾಡದಿರಲು ಆಗುವುದಿಲ್ಲ. ತಮ್ಮಲ್ಲಿ ಶ್ರದ್ಧೆಯಿರುವ ಮತ್ತು ಅ ಕಾರಣದಿಂದ ಮುಸಲ್ಮಾನರಲ್ಲಿ ನಂಬಿಕೆಯಿರುವ ಹಿಂದೂ ಯುವಕರ ಒಂದು ತಂಡವನ್ನು ನಾನು ಕಟ್ಟಬಲ್ಲೆನಾದರೆ, ಆ ತಂಡ ದುರ್ಬಲರಿಗೆ ಒಂದು ರಕ್ಷಾಕವಚವಾಗುತ್ತದೆ. ಅವರು (ಆ ಹಿಂದೂ ಯುವಕರು) (ಇತರರನ್ನು) ಕೊಲ್ಲದೆ ಸಾಯುವುದು ಹೇಗೆಂಬುದನ್ನು ಬೋಧಿಸುತ್ತಾರೆ. ನನಗೆ ಬೇರಾವ ಮಾರ್ಗವೂ ಗೊತ್ತಿಲ್ಲ. ದುಃಖ ತಮ್ಮನ್ನು ಸುತ್ತುವರಿದಿರುವುದನ್ನು ಕಂಡಾಗ, ನಮ್ಮ ಪೂರ್ವಜರು ತಪಸ್ಸನ್ನು ಕೈಗೊಂಡರು. ದೇಹದ ಅಸಹಾಯಕತೆಯನ್ನು ಅವರು ಮನಗಂಡರು

ಮತ್ತು ತಮ್ಮ ಅಸಹಾಯಕತೆಯಲ್ಲಿ ತಮ್ಮ ಕರೆಗೆ ಕಿವಿಗೊಡುವಂತೆ ಭಗವಂತನನ್ನು ಬಲಾತ್ಕರಿಸುವವರೆಗೂ ಪ್ರಾರ್ಥನೆ ಮಾಡಿದರು. ನನ್ನ ಹಿಂದೂ ಮಿತ್ರ ಹೇಳುತ್ತಾನೆ, "ನಿಜ, ಆದರೆ ಆಗ ದೇವರು ಆಯುಧ ಹಿಡಿಯಲು ಒಬ್ಬನನ್ನು ಕಳುಹಿಸಿದ್ದ." ಈ ಮಾರುತ್ತರದ ಸತ್ಯವನ್ನು ನಿರಾಕರಿಸುವುದರಲ್ಲಿ ನನಗೆ ಆಸ್ಥೆಯಿಲ್ಲ. ಆ ಮಿತ್ರನಿಗೆ ನಾನು ಹೇಳುವುದೆಲ್ಲಾ ಇಷ್ಟು: ಹಿಂದೂವು ಕಾರಣವನ್ನು ಕಡಗಣಿಸಿ ಫಲವನ್ನು ಪಡೆದುಕೊಳ್ಳಲಾರ. ನಾವು ಸಾಕಷ್ಟು ತಪಸ್ಸು ಮಾಡಿದ ಮೇಲೆ ಹೋರಾಡಲು ಕಾಲ ಸರಿಯಾಗಿರುತ್ತದೆ. ನಾವು ಸಾಕಷ್ಟು ಪರಿಶುದ್ಧರಾಗಿ ಇದ್ದೇವೆಯೇ? ಎಂದು ನಾನು ಕೇಳುತ್ತೇನೆ. ವ್ಯಕ್ತಿಗಳ ಸ್ವಂತ ಪರಿಶುದ್ಧತೆಯ ವಿಷಯ ಹಾಗಿರಲಿ, ಅಸ್ಪೃಶ್ಯತೆಯ ಪಾಪಕ್ಕೆ ಮನಃಪೂರ್ವಕವಾದ ಪ್ರಾಯಶ್ಚಿತ್ತವನ್ನಾದರೂ ಮಾಡಿಕೊಂಡಿದ್ದೇವೆಯೇ? ನಮ್ಮ ಧರ್ಮಗುರುಗಳು ಅವರು ಹೇಗೆ ಇರಬೇಕೋ ಅದರಂತೆ ಪೂರ್ಣವಾಗಿ ಇದ್ದಾರೆಯೇ? ಮುಸಲ್ಮಾನನ ನಡತೆಯಲ್ಲಿ ಹುಳುಕು ಹುಡುಕುವುದರಲ್ಲೇ ಸುಮ್ಮನೆ ನಮ್ಮ ಗಮನವನ್ನು ನೆಟ್ಟಿರುತ್ತಾ ನಾವು ಗಾಳಿಯನ್ನು ಗುದ್ದುತ್ತಿದ್ದೇವೆ.

*ಯಂಗ್ ಇಂಡಿಯಾ*, 19 ಜೂನ್ 1924



# 11

# ಹಿಂದೂಧರ್ಮ ಇಂದು

ಹಿಂದೂಧರ್ಮವು ಉನ್ನತಿ–ಅವನತಿಗಳಿಗೆ ಒಳಗಾದ ಮತ್ತು ನಿಸರ್ಗದ ನಿಯಮಗಳಿಗೆ ಅಧೀನವಾದ ಒಂದು ಜೀವಂತ ಸಮಷ್ಟಿ. ಮೂಲದಲ್ಲಿ ಒಂದು ಹಾಗೂ ಅಖಂಡವಾಗಿದ್ದರೂ ಅದು ಅಸಂಖ್ಯಾತ ರೆಂಬೆಗಳಿರುವ ಒಂದು ಹೆಮ್ಮರವಾಗಿ ಬೆಳೆದಿದೆ. ಋತುಗಳ ವ್ಯತ್ಯಾಸಗಳು ಅದರ ಮೇಲೆ ಪರಿಣಾಮ ಬೀರುತ್ತವೆ. ಅದು ಅದರ ಶರತ್ ಹಾಗೂ ಗ್ರೀಷ್ಮ, ಶಿಶಿರ ಹಾಗೂ ವಸಂತಗಳನ್ನು ಹೊಂದಿದೆ. ಮಳೆಗಳು ಅದನ್ನು ಪೋಷಿಸುತ್ತವೆ ಮತ್ತು ಫಲಭರಿತವನ್ನಾಗಿ ಕೂಡ ಮಾಡುತ್ತವೆ. ಅದು ವೇದಗಳ ಆಧಾರದ ಮೇಲೆ ನಿಂತಿದೆ ಹಾಗೂ ನಿಂತಿಲ್ಲ. ಅದು ತನ್ನ ಅಧಿಕಾರವನ್ನು ಒಂದೇ ಗ್ರಂಥದಿಂದ ಪಡೆದಿಲ್ಲ. ಗೀತೆಯು ಸಾರ್ವತ್ರಿಕವಾಗಿ ಅಂಗೀಕೃತವಾಗಿದೆ, ಆದರೂ ಅದು ದಿಗ್ದರ್ಶನವನ್ನು ಮಾತ್ರ ಮಾಡುತ್ತದೆ. ಸಂಪ್ರದಾಯದ ಮೇಲೆ ಅದರ ಪರಿಣಾಮ ತೀರ ಕಡಿಮೆ. ಹಿಂದೂಧರ್ಮ ಗಂಗೆಯಂತೆ, ಮೂಲದಲ್ಲಿ ಶುದ್ಧ ಮತ್ತು ನಿಷ್ಕಲ್ಮಶ, ಆದರೆ ಹರಿಯುವಾಗ ದಾರಿಯಲ್ಲಿನ ಕಶ್ಮಲಗಳನ್ನು ಸ್ವೀಕರಿಸುತ್ತದೆ. ಪ್ರತಿಯೊಂದು ಪ್ರಾಂತ್ಯದಲ್ಲಿಯೂ ಅದು ಒಂದು ಪ್ರಾಂತೀಯ ರೂಪವನ್ನು ತೆಗೆದುಕೊಳ್ಳುತ್ತದೆ, ಆದರೆ ಒಳಸತ್ವವನ್ನು ಎಲ್ಲೆಡೆಯಲ್ಲಿಯೂ ಉಳಿಸಿಕೊಳ್ಳುತ್ತದೆ. ಸಂಪ್ರದಾಯವು ಧರ್ಮವಲ್ಲ. ಸಂಪ್ರದಾಯವು ಬದಲಾಗಬಹುದು, ಆದರೆ ಧರ್ಮವು ಬದಲಾಗದೆ ಉಳಿಯುತ್ತದೆ.

ಹಿಂದೂಧರ್ಮದ ಪರಿಶುದ್ಧತೆಯು ಅದರ ಅನುಯಾಯಿಗಳ ಆತ್ಮ ಸಂಯಮವನ್ನು ಅವಲಂಬಿಸಿರುತ್ತದೆ. ತಮ್ಮ ಧರ್ಮ ಅಪಾಯಕ್ಕೆ ಸಿಕ್ಕಿದಾಗಲೆಲ್ಲಾ,

ಹಿಂದೂಗಳು ಕಠಿನ ತಪಸ್ಸನ್ನು ಕೈಗೊಂಡು, ಅಪಾಯದ ಕಾರಣಗಳನ್ನು ಹುಡುಕಿ, ಅವನ್ನು ಎದುರಿಸುವ ಸಾಧನೋಪಾಯಗಳನ್ನು ರೂಪಿಸಿದ್ದಾರೆ. ಅವರ ಶಾಸ್ತ್ರಗಳು ಸದಾ ಬೆಳೆಯುತ್ತಿವೆ. ವೇದಗಳು, ಉಪನಿಷತ್ತುಗಳು, ಸ್ಮೃತಿಗಳು, ಪುರಾಣಗಳು ಮತ್ತು ಇತಿಹಾಸಗಳು ಒಂದೇ ಕಾಲದಲ್ಲಿ ಉದಿಸಲಿಲ್ಲ. ಪ್ರತಿಯೊಂದೂ ನಿರ್ದಿಷ್ಟ ಕಾಲಗಳ ಅಗತ್ಯಗಳಿಂದ ಹುಟ್ಟಿದವು. ಆದ್ದರಿಂದ ಅವು ಪರಸ್ಪರ ವಿರುದ್ಧವಾಗಿರುವಂತೆ ಕಾಣಿಸುತ್ತವೆ. ಈ ಗ್ರಂಥಗಳು ಶಾಶ್ವತ ಸತ್ಯಗಳನ್ನು ಹೊಸದಾಗಿ ನಿರೂಪಿಸುವುದಿಲ್ಲ, ಆದರೆ ಆ ಗ್ರಂಥಗಳ ಕಾಲದಲ್ಲಿ ಇವನ್ನು ಹೇಗೆ ಆಚರಿಸಲಾಗುತ್ತಿತ್ತು ಎನ್ನುವುದನ್ನು ತೋರಿಸುತ್ತವೆ. ಒಂದು ನಿರ್ದಿಷ್ಟ ಕಾಲದಲ್ಲಿ ಸಮರ್ಪಕವಾಗಿದ್ದ ಒಂದು ಆಚಾರವನ್ನು ಇನ್ನೊಂದು ಕಾಲದಲ್ಲಿ ಕುರುಡುಕುರುಡಾಗಿ ಆಚರಿಸಿದರೆ ಅದು ಜನರನ್ನು ನಿರಾಶೆಯ ಕೂಪಕ್ಕೆ ಒಯ್ಯುತ್ತದೆ. ಪ್ರಾಣಬಲಿ ಒಂದು ಕಾಲದಲ್ಲಿ ಬಳಕೆಯಲ್ಲಿತ್ತೆಂಬ ಕಾರಣಕ್ಕಾಗಿ ನಾವು ಅದನ್ನು ಇಂದು ಮತ್ತೆ ಬಳಕೆಗೆ ತರೋಣವೇ? ಒಂದು ಕಾಲದಲ್ಲಿ ನಾವು ಗೋಮಾಂಸ ತಿನ್ನುತ್ತಿದ್ದೇವೆಂದು, ನಾವು ಇಂದು ಹಾಗೆಯೇ ಮಾಡೋಣವೇ? ಒಂದು ಕಾಲದಲ್ಲಿ ನಾವು ಕಳ್ಳರ ಕೈಕಾಲುಗಳನ್ನು ಕಡಿದುಹಾಕುತ್ತಿದ್ದೆವೆಂದು, ಆ ಕ್ರೂರಕಾರ್ಯವನ್ನು ನಾವು ಮತ್ತೆ ಜಾರಿಗೆ ತರೋಣವೇ? ಶಿಶುವಿವಾಹವನ್ನು ನಾವು ಪುನರುಜ್ಜೀವನಗೊಳಿಸೋಣವೇ? ಒಂದು ದಿನ ನಾವು ಮಾನವಸಮಾಜದ ಒಂದು ಭಾಗವನ್ನು ತೊರೆದದ್ದಕ್ಕಾಗಿ, ಅವರ ಸಂತತಿಯವರಿಗೆ ನಾವು ಇಂದು ಜಾತಿಬಾಹಿರರೆಂಬ ಮುದ್ರೆ ಒತ್ತೋಣವೇ?

ಹಿಂದೂಧರ್ಮವು ಸ್ಥಗಿತತ್ವವನ್ನು ಸಹಿಸುವುದಿಲ್ಲ. ಜ್ಞಾನಕ್ಕೆ ಎಲ್ಲೆಯಿಲ್ಲ. ಸತ್ಯದ ಪ್ರಯೋಗಕ್ಕೂ ಅಂತೆಯೇ. ಆತ್ಮಶಕ್ತಿಯ ವಿಷಯದಲ್ಲಿ ನಮ್ಮ ಜ್ಞಾನವನ್ನು ನಾವು ಪ್ರತಿದಿನ ಹೆಚ್ಚಿಸುತ್ತೇವೆ ಮತ್ತು ಹಾಗೆಯೇ ಮಾಡುತ್ತಾ ಹೋಗುತ್ತೇವೆ. ಹೊಸ ಅನುಭವ ನಮಗೆ ಹೊಸ ಕರ್ತವ್ಯಗಳನ್ನು ಬೋಧಿಸುತ್ತದೆ, ಆದರೆ ಸತ್ಯವು ಎಂದಿಗೂ ಒಂದೇ ಆಗಿರುತ್ತದೆ. ಅದರ ಸಂಪೂರ್ಣರೂಪದಲ್ಲಿ ಯಾರು ತಾನೇ ಅದನ್ನು ಅರಿತಿದ್ದಾರೆ? ವೇದಗಳು ಸತ್ಯವನ್ನು ಪ್ರತಿನಿಧಿಸುತ್ತವೆ; ಅವು ಅನಂತವಾಗಿವೆ. ಆದರೆ ಅವನ್ನು ಯಾರು ತಾನೇ ಸಂಪೂರ್ಣವಾಗಿ ತಿಳಿದುಕೊಂಡಿದ್ದಾರೆ? ವೇದಗಳು ಎಂದು ಇಂದು ಹೆಸರು ಹೊತ್ತಿರುವುವು ಜ್ಞಾನಗ್ರಂಥವಾದ ನಿಜವಾದ ವೇದದ ದಶಲಕ್ಷದ ಒಂದು ಭಾಗವೂ ಆಗಿಲ್ಲ. ನಮಗೆ ಸಿಕ್ಕಿರುವ ಕೆಲವೇ ಗ್ರಂಥಗಳದ್ದೂ ಕೂಡ ಸಂಪೂರ್ಣ ಅರ್ಥವನ್ನು ಯಾರು ತಿಳಿದುಕೊಂಡಿದ್ದಾರೆ? ಕೊನೆಯೇ ಇಲ್ಲದ ಈ ಗೋಜಲುಗಳ ಮೂಲಕ ಹಾಯ್ದು ಹೋಗುವ ಬದಲು, ಒಂದು ಸಂಗತಿಯನ್ನು ತಿಳಿದುಕೊಳ್ಳುವಂತೆ

ನಮ್ಮ ಋಷಿಗಳು ನಮಗೆ ಬೋಧಿಸಿದರು: "ಆತ್ಮದಂತೆಯೇ ಬ್ರಹ್ಮಾಂಡ" ಆತ್ಮವನ್ನು ವಿವರವಾಗಿ ಪರಿಶೀಲಿಸಲಾಗುವಂತೆ ಬ್ರಹ್ಮಾಂಡವನ್ನು ಪರಿಶೀಲಿಸಲು ಆಗುವುದಿಲ್ಲ. ಆತ್ಮವನ್ನು ಅರಿತುಕೋ: ಬ್ರಹ್ಮಾಂಡವನ್ನು ಅರಿತುಕೊಳ್ಳುತ್ತೀಯೆ. ಒಳಗಿರುವ ಆತ್ಮದ ಜ್ಞಾನವು ಕೂಡ ನಿರಂತರ – ನಿರಂತರವಷ್ಟೇ ಅಲ್ಲದೆ ಪರಿಶುದ್ಧ – ಪ್ರಯತ್ನವನ್ನು ಪೂರ್ವಭಾವಿಯಾಗಿ ಹೊಂದಿರುತ್ತದೆ. ಪರಿಶುದ್ಧ ಪ್ರಯತ್ನ ಪರಿಶುದ್ಧ ಹೃದಯವನ್ನು ಪೂರ್ವಭಾವಿಯಾಗಿ ಹೊಂದಿರುತ್ತದೆ ಮತ್ತು ಇದು ತನ್ನ ಸರದಿಯಲ್ಲಿ ಯಮಗಳ ಮತ್ತು ನಿಯಮಗಳ* ಪ್ರಧಾನ ಮತ್ತು ಅಂಗ ಗುಣಗಳ – ಅಭ್ಯಾಸವನ್ನು ಅವಲಂಬಿಸುತ್ತದೆ.

ಈ ಅಭ್ಯಾಸವು ದೇವರ ಅನುಗ್ರಹವಿಲ್ಲದೆ ಸಾಧ್ಯವಿಲ್ಲ. ಈ ಅನುಗ್ರಹ ಶ್ರದ್ಧಾಭಕ್ತಿಗಳನ್ನು ಪೂರ್ವಭಾವಿಯಾಗಿ ಹೊಂದಿರುತ್ತದೆ. ತುಲಸಿದಾಸರು ರಾಮನ ಮಹಿಮೆಯನ್ನು ಹಾಡಿದ್ದು ಇದಕ್ಕಾಗಿಯೇ. ಭಾಗವತದ ಕರ್ತೃ ದ್ವಾದಶಾಕ್ಷರಮಂತ್ರ (ಓಂ ನಮೋ ಭಗವತೇ ವಾಸುದೇವಾಯ)ವನ್ನು ಉಪದೇಶಿಸಿದ್ದು ಇದಕ್ಕಾಗಿಯೆ. ಹೃತ್ಪೂರ್ಣವಾಗಿ ಈ ಮಂತ್ರವನ್ನು ಜಪಿಸುವವನೇ ಸನಾತನಿ ಹಿಂದೂ ಎಂದು ನನ್ನ ಅಭಿಪ್ರಾಯ. ಉಳಿದೆಲ್ಲವೂ, ಮುನಿ ಅಖೊ** ಹೇಳಿದಂತೆ, ಒಂದು ತಳವಿಲ್ಲದ ಬಾವಿ.

ಐರೋಪ್ಯರು ನಮ್ಮ ರೀತಿನೀತಿಗಳನ್ನು ಮತ್ತು ಸಂಪ್ರದಾಯಗಳನ್ನು ಅಧ್ಯಯನ ಮಾಡುತ್ತಾರೆ. ಆದರೆ ಅವರದು ಒಬ್ಬ ವಿಮರ್ಶಕನ ಅಧ್ಯಯನ, ಒಬ್ಬ ಭಕ್ತನ ಅಧ್ಯಯನವಲ್ಲ. ಅವರ 'ಅಧ್ಯಯನ' ನನಗೆ ಧರ್ಮವನ್ನು ಬೋಧಿಸಲಾರದು.

ಹಿಂದೂಧರ್ಮವು ತಿನ್ನುವುದರಲ್ಲಿ ಮತ್ತು ತಿನ್ನದಿರುವುದರಲ್ಲಿ ಅಡಗಿಲ್ಲ. ಅದರ ಸಾರ ಇರುವುದು ಒಳ್ಳೆಯ ನಡತೆಯಲ್ಲಿ, ಸತ್ಯ ಅಹಿಂಸೆಗಳ ಸರಿಯಾದ ಆಚರಣೆಯಲ್ಲಿ. ಮಾಂಸವನ್ನು ತಿನ್ನುವ ಆದರೆ ಸದ್ಗುಣಗಳಾದ ದಯೆ ಸತ್ಯಗಳನ್ನು ಪಾಲಿಸುವ ಮತ್ತು ದೇವರಲ್ಲಿ ಭಯಭಕ್ತಿಯಿಟ್ಟು ಜೀವನ ನಡೆಸುವ ಎಷ್ಟೋವ್ಯಕ್ತಿಗಳು ಮಾಂಸವನ್ನು ತ್ಯಜಿಸಿರುವ ಆಷಾಢಭೂತಿಗಿಂತ ಉತ್ತಮ ಹಿಂದೂಗಳಾಗಿರುತ್ತಾರೆ. ಗೋಮಾಂಸ ಭಕ್ಷಣದಲ್ಲಿನ ಅಥವಾ ಮಾಂಸಾಹಾರ

---

* ಯೋಗಶಾಸ್ತ್ರದ ಪ್ರಕಾರ, ಯಮಗಳು ಎಂದರೆ ಅಹಿಂಸೆ, ಸತ್ಯ, ಅಸ್ತೇಯ (ಕದಿಯದಿರುವುದು), ಬ್ರಹ್ಮಚರ್ಯ, ಅಪರಿಗ್ರಹ (ಸ್ವಂತವಾಗಿ ಏನನ್ನೂ ಹೊಂದದಿರುವುದು). ಅದೇ ಗ್ರಂಥದ ಪ್ರಕಾರ, ನಿಯಮಗಳು ಎಂದರೆ ಶೌಚ (ದೈಹಿಕ ಶುದ್ಧತೆ), ಸಂತೋಷ(ತೃಪ್ತಿ), ತಪಸ್ಸು(ಸಹಿಷ್ಣುತೆ), ಸ್ವಾಧ್ಯಾಯ(ವೇದಾಧ್ಯಯನ), ಈಶ್ವರಪ್ರಾಣಿಧಾನ(ದೇವರಿಗೆ ಶರಣಾಗತಿ).

–ಎಂ.ಡಿ

** ಗುಜರಾತಿನ ಒಬ್ಬ ಕವಿದಾರ್ಶನಿಕ

ದಲ್ಲಿನ ಹಿಂಸೆಯ ಸತ್ಯಕ್ಕೆ ಕಣ್ಣು ತೆರೆದು, ಆ ಕಾರಣಕ್ಕಾಗಿ ಅವನ್ನು ತ್ಯಜಿಸಿ, "ಮಾನವ, ಪಕ್ಷಿ ಮತ್ತು ಪ್ರಾಣಿ ಎಲ್ಲವನ್ನೂ" ಪ್ರೀತಿಸುವವನು ನಮ್ಮ ಗೌರವಾದರಗಳಿಗೆ ಪಾತ್ರನಾಗಿರುತ್ತಾನೆ. ಅವನು ದೇವರನ್ನು ಕಂಡಿದ್ದಾನೆ ಮತ್ತು ಅರಿತಿದ್ದಾನೆ. ಅವನು ದೇವರ ಪರಮಭಕ್ತ. ಮಾನವಕುಲದ ಗುರು ಅವನು.

ಹಿಂದೂಧರ್ಮ ಮತ್ತು ಇತರ ಎಲ್ಲಾ ಧರ್ಮಗಳನ್ನೂ ತಕ್ಕಡಿಯಲ್ಲಿ ತೂಗಲಾಗುತ್ತಿದೆ. ಶಾಶ್ವತ ಸತ್ಯ ಒಂದೇ. ದೇವರೂ ಒಬ್ಬನೇ. ನಮ್ಮಲ್ಲಿ ಪ್ರತಿಯೊಬ್ಬರೂ ಪರಸ್ಪರ ಘರ್ಷಣೆಯಲ್ಲಿರುವ ಮತಗಳು ಮತ್ತು ಆಚಾರಗಳಿಂದ ದೂರ ಸರಿದು, ಸತ್ಯದ ನೇರ ಮಾರ್ಗವನ್ನು ಅನುಸರಿಸೋಣ. ಆಗ ಮಾತ್ರವೇ ನಾವು ನಿಜವಾದ ಹಿಂದೂಗಳಾಗುತ್ತೇವೆ. ತಮ್ಮನ್ನು ಸನಾತನಿಗಳೆಂದು ಕರೆದುಕೊಳ್ಳುತ್ತಾ ಅನೇಕ ಜನ ಭೂಮಿಯ ಮೇಲೆ ಓಡಾಡುತ್ತಿದ್ದಾರೆ. ಅವರಲ್ಲಿ ಎಷ್ಟು ಜನರನ್ನು ದೇವರು ಆಯ್ದುಕೊಳ್ಳುತ್ತಾನೆ ಎನ್ನುವುದನ್ನು ಯಾರು ಬಲ್ಲರು? ದೇವರ ಅನುಗ್ರಹವು ಅವನ ಸಂಕಲ್ಪವನ್ನು ನೆರವೇರಿಸಿ, ಅವನನ್ನು ಸೇವಿಸುವವರಿಗೆ ದೊರೆಯುತ್ತದೆ, ಸುಮ್ಮನೆ "ರಾಮು, ರಾಮು" ಎಂದು ವಟಗುಟ್ಟುವವರಿಗಲ್ಲ.

*ಯಂಗ್ ಇಂಡಿಯಾ*, **8 ಏಪ್ರಿಲ್ 1926**



# 12

# ಬಹುತಲೆಯ ಭೂತ

ಪುರಾಣಗಳಲ್ಲಿ ಹೇಳಿರುವ ಕಥೆಗಳಲ್ಲಿ ಕೆಲವು, ಸದ್ಯದ ಪರಿಸ್ಥಿತಿಗಳ ಮೇಲೆ ಬೀರುವ ಪರಿಣಾಮುಗಳನ್ನು ನಾವು ಅರಿಯದಿದ್ದಲ್ಲಿ, ಬಹಳ ಅಪಾಯಕಾರಿಗಳಾಗಿವೆ. ಶಾಸ್ತ್ರಗಳಲ್ಲಿ ಹೇಳಿರುವ ಪ್ರತಿಯೊಂದು ವಿವರಕ್ಕೆ ಅವುಗಳಲ್ಲಿ ವರ್ಣಿಸಿರುವ ಪಾತ್ರಗಳಿಗೆ ಅನುಸಾರವಾಗಿ ನಾವು ನಮ್ಮ ವರ್ತನೆಯನ್ನು ನಿಯಂತ್ರಿಸಿಕೊಂಡರೆ ಶಾಸ್ತ್ರಗಳು ನಮಗೆ ಸಾವಿನ ಕೂಪಗಳಾಗುತ್ತವೆ. ಮುಲಭೂತ ಸೂತ್ರಗಳ ಲಕ್ಷಣಗಳನ್ನು ತಿಳಿಸಲು ಮತ್ತು ಅವನ್ನು ಸಮರ್ಥಿಸಲು ಮಾತ್ರವೇ ಅವು ನಮಗೆ ಸಹಾಯಮಾಡುತ್ತವೆ. ದರ್ಮಗ್ರಂಥಗಳಲ್ಲಿನ ಒಂದು ಸುಪ್ರಸಿದ್ಧ ಪಾತ್ರ ದೇವರಿಗೆ ಅಥವಾ ಮಾನವನಿಗೆ ಅಪಚಾರವೆಸಗಿದರೆ, ಆ ಪಾಪವನ್ನು ನಾವು ಮತ್ತೆ ಮಾಡುವುದಕ್ಕೆ ಅದು ಒಂದು ಸಮರ್ಥನೆಯಾಗುತ್ತದೆಯೇ? ಪ್ರಪಂಚದಲ್ಲಿ ಗಣ್ಯವಾಗುವುದು ಸತ್ಯವೊಂದೇ, ಸತ್ಯವೇ ದೇವರು ಎಂದು ಆತ್ಯಂತಿಕವಾಗಿ ನಮಗೆ ಹೇಳಿಬಿಟ್ಟರೆ ಸಾಕು. ಯುಧಿಷ್ಠಿರನು ಕೂಡ ಅಸತ್ಯಕ್ಕೆ ಬಿದ್ದ ಎನ್ನುವುದು ಅಪ್ರಕೃತ. ಅವನು ಒಂದು ಅಸತ್ಯವನ್ನು ನುಡಿದಾಗ ಅದೇ ಕ್ಷಣದಲ್ಲಿ ಅವನು ದುಃಖಕ್ಕೆ ಈಡಾಗಬೇಕಾಯಿತು ಮತ್ತು ಅವನ ದೊಡ್ಡ ಹೆಸರು ಅವನನ್ನು ಶಿಕ್ಷೆಯಿಂದ ಯಾವುದೇ ರೀತಿಯಲ್ಲೂ ಕಾಪಾಡಲಿಲ್ಲ ಎಂಬುದನ್ನು ನಾವು ತಿಳಿದುಕೊಳ್ಳುವುದು ಹೆಚ್ಚು ಪ್ರಕೃತ. ಅದೇ ರೀತಿಯಲ್ಲಿ, ಆದಿಶಂಕರರು ಚಂಡಾಲನೊಬ್ಬನನ್ನು ದೂರವಿಟ್ಟರು ಎಂಬುದನ್ನು ನಮಗೆ ಹೇಳುವುದೂ ಅಪ್ರಕೃತ. ಎಲ್ಲ ಜೀವಿಗಳನ್ನೂ ನಮ್ಮಂತೆಯೇ ಕಾಣಬೇಕೆಂದು ಬೋಧಿಸುವ ಧರ್ಮವೊಂದು, ಸಂಪೂರ್ಣವಾಗಿ ನಿರಪರಾಧಿಗಳಾದ ಮಾನವವ್ಯಕ್ತಿಗಳ ಇಡೀ

ವರ್ಗವೊಂದನ್ನು ಹಾಗಿರಲಿ, ಒಂದೇ ಒಂದು ಪ್ರಾಣಿಯನ್ನು ಅಮಾನವೀಯವಾಗಿ ಕಾಣುವುದನ್ನು ಸಹಿಸುವುದು ಸಾಧ್ಯವಿಲ್ಲ ಎಂದು ನಾವು ತಿಳಿದುಕೊಂಡರೆ ಸಾಕು. ಜೊತೆಗೆ ಆದಿಶಂಕರರು ಏನು ಮಾಡಿದರು ಅಥವಾ ಏನು ಮಾಡಲಿಲ್ಲ ಎನ್ನುವುದನ್ನು ನಾವು ತೀರ್ಮಾನಿಸಲು ನಮ್ಮ ಎದುರು ಎಲ್ಲಾ ಸಂಗತಿಗಳು ಕೂಡ ಇಲ್ಲ. ಚಂಡಾಲ ಎಂಬ ಶಬ್ದ ಪ್ರಯುಕ್ತವಾಗಿರುವ ಕಡೆ ಆ ಪದದ ಅರ್ಥವೇನು ಎಂದು ನಮಗೆ ತಿಳಿದಿರುವುದು ಇನ್ನೂ ಕಡಮೆ. ಎಲ್ಲರೂ ಒಪ್ಪಿರುವಂತೆ ಅದಕ್ಕೆ ಅನೇಕ ಅರ್ಥಗಳಿವೆ. ಪಾಪಿ ಎನ್ನುವುದು ಅವುಗಳಲ್ಲಿ ಒಂದು. ಆದರೆ ಎಲ್ಲಾ ಪಾಪಿಗಳನ್ನೂ ಅಸ್ಪೃಶ್ಯರೆಂದು ಪರಿಗಣಿಸಬೇಕಾದಲ್ಲಿ, ಆಗ ಆ ಪಂಡಿತರನ್ನೂ* ಹೊರತುಪಡಿಸದಂತೆ ನಾವೆಲ್ಲರೂ ಅಸ್ಪೃಶ್ಯತೆಯ ನಿಷೇಧಕ್ಕೆ ಬಹಳಮಟ್ಟಿಗೆ ಒಳಗಾಗಬೇಕಾಗಿರುತ್ತದೆ. ಅಸ್ಪೃಶ್ಯತೆ ಒಂದು ಹಳೆಯ ಪದ್ಧತಿ ಎನ್ನುವುದನ್ನು ಯಾರೂ ಎಂದೂ ನಿರಾಕರಿಸಿಲ್ಲ. ಆದರೆ ಅದೊಂದು ಕೇಡು. ಅದರ ಪ್ರಾಚೀನತೆಯ ಆಧಾರದ ಮೇಲೆ ಅದನ್ನು ಸಮರ್ಥಿಸಲಾಗುವುದಿಲ್ಲ.

*ಯಂಗ್ ಇಂಡಿಯಾ*, 29 ಜುಲೈ 1926

---

* ಈ ಉಲ್ಲೇಖವನ್ನು ತೆಗೆದುಕೊಂಡಿರುವ ಲೇಖನವನ್ನು ದಕ್ಷಿಣದ ಪಂಡಿತರೊಬ್ಬರು ಅಸ್ಪೃಶ್ಯತೆಯ ಪರವಾಗಿ ಮಾಡಿರ ಮನವಿಯೊಂದಕ್ಕೆ ಉತ್ತರವಾಗಿ ಬರೆಯಲಾಯಿತು.



## 13

# ತುಲಸಿದಾಸ

ತುಲಸಿ ರಾಮಾಯಣದ ವಿಷಯದಲ್ಲಿ ನನ್ನ ದೃಷ್ಟಿಯ ಬಗ್ಗೆ ಕೆಲವು ಸ್ನೇಹಿತರು ವಿವಿಧ ಸಂದರ್ಭಗಳಲ್ಲಿ ತಮ್ಮ ಟೀಕೆಗಳನ್ನು ನನಗೆ ಕಳುಹಿಸಿದ್ದಾರೆ. ಅವರ ಟೀಕೆಗಳ ಸಾರ ಈ ಮುಂದಿನಂತಿದೆ:

> ರಾಮಾಯಣವನ್ನು ನೀವು ಗ್ರಂಥಗಳಲ್ಲೆಲ್ಲಾ ಅತಿಶ್ರೇಷ್ಠವಾದುದೆಂದು ವರ್ಣಿಸಿದ್ದೀರಿ. ಆದರೆ ನಿಮ್ಮ ಅಭಿಪ್ರಾಯದೊಂದಿಗೆ ಹೊಂದಿಕೊಳ್ಳಲು ನಮಗೆ ಎಂದಿಗೂ ಆಗಿಲ್ಲ. ತುಲಸಿದಾಸರು ಸ್ತ್ರೀಜಾತಿಯನ್ನು ಹೇಗೆ ಹೀನಾಯಮಾಡಿದ್ದಾರೆ, ವಾಲಿಯ ಮೇಲೆ ರಾಮನ ವೀರೋಚಿತವಲ್ಲದ ಹೊಂಚಿನ ದಾಳಿಯನ್ನು ಸಮರ್ಥಿಸಿದ್ದಾರೆ, ತನ್ನ ದೇಶಕ್ಕೆ ದ್ರೋಹ ಬಗೆದದ್ದಕ್ಕಾಗಿ ವಿಭೀಷಣನನ್ನು ಹೊಗಳಿದ್ದಾರೆ, ಮತ್ತು ಸೀತೆಗೆ ಘೋರ ಅನ್ಯಾಯ ಮಾಡಿದ್ದರೂ ರಾಮನನ್ನು ಅವತಾರವೆಂದು ವರ್ಣಿಸಿದ್ದಾರೆ ಎನ್ನುವುದು ನಿಮಗೆ ಕಾಣುವುದಿಲ್ಲವೇ? ಇಂಥ ಒಂದು ಗ್ರಂಥದಲ್ಲಿ ನೀವು ಯಾವ ಸೌಂದರ್ಯವನ್ನು ನೋಡುತ್ತೀರಿ? ಅಥವಾ ಗ್ರಂಥದ ಕಾವ್ಯಾತ್ಮಕ ಸೌಂದರ್ಯವು ಉಳಿದ ಎಲ್ಲಕ್ಕೂ ಪರಿಹಾರವಾಗಿದೆ ಎಂದು ನೀವು ಭಾವಿಸುತ್ತೀರಾ? ಹಾಗಿದ್ದಲ್ಲಿ, ಆಗ ನಾವು ಆ ಕಾರ್ಯಕ್ಕೆ ನಿಮಗೆ ಅರ್ಹತೆಗಳು ಇಲ್ಲ ಎಂದು ಹೇಳುವ ಧೈರ್ಯ ಮಾಡುತ್ತೇವೆ.

ಟೀಕೆಗಳ ಪ್ರತಿ ಅಂಶವನ್ನೂ ನಾವು ಪ್ರತ್ಯೇಕವಾಗಿ ತೆಗೆದುಕೊಂಡರೆ ಅವನ್ನು ನಿರಾಕರಿಸುವುದು ಕಷ್ಟ ಎಂಬುದನ್ನು ನಾನು ಒಪ್ಪುತ್ತೇನೆ. ಈ ರೀತಿ ಇಡೀ ರಾಮಾಯಣವನ್ನು ಸುಲಭವಾಗಿ ಖಂಡಿಸಬಹುದು. ಆದರೆ ಇದನ್ನು ಬಹುತೇಕ

ಎಲ್ಲ ವಿಷಯಗಳ ಮತ್ತು ಎಲ್ಲ ವ್ಯಕ್ತಿಗಳ ಬಗ್ಗೆಯೂ ಹೇಳಬಹುದು. ಒಬ್ಬ ಪ್ರಸಿದ್ಧ ಕಲೆಗಾರನ ವಿಷಯದಲ್ಲಿ ಒಂದು ಕಥೆಯನ್ನು ಹೇಳುತ್ತಾರೆ. ತನ್ನನ್ನು ಟೀಕಿಸುವವರಿಗೆ ಉತ್ತರ ಕೊಡುವುದಕ್ಕಾಗಿ ಅವನು ತನ್ನ ಚಿತ್ರವನ್ನು ಒಂದು ಪ್ರದರ್ಶನದ ಗೂಡಿನಲ್ಲಿರಿಸಿ, ಸಂದರ್ಶಕರು ತಾವು ಮೆಚ್ಚದ ಭಾಗದ ಮೇಲೆ ಗುರುತು ಹಾಕುವ ತಮ್ಮ ಅಭಿಪ್ರಯಾವನ್ನು ಸೂಚಿಸಲು ಕೋರಿದ. ಅದರ ಪರಿಣಾಮವೆಂದರೆ ಟೀಕಾಕಾರರ ಗುರುತಗಳಿಂದ ತುಂಬದ ಯಾವುದೇ ಭಾಗ ಅದರಲ್ಲಿ ಇರದಾಯಿತು. ಆದರೆ, ವಸ್ತುತಃ, ಆ ಚಿತ್ರವು ಕಲೆಯ ಒಂದು ಆಚಾರ್ಯಕೃತಿಯಾಗಿತ್ತು. ನಿಜದಲ್ಲಿ ವೇದಗಳು, ಬೈಬಲು ಮತ್ತು ಕುರಾನು ಕೂಡ ಖಂಡನೆಯಿಂದ ಹೊರತಾಗಿಲ್ಲ. ಗ್ರಂಥ ಒಂದರ ಸರಿಯಾದ ಬೆಲೆಯನ್ನು ನಿರ್ಧರಿಸಬೇಕಾದರೆ, ಅದನ್ನೊಂದು ಇಡೀ ಕೃತಿಯಾಗಿ ಎಣಿಸಿ ತೀರ್ಮಾನಿಸಬೇಕು. ಬಾಹ್ಯ ವಿಮರ್ಶೆಯ ವಿಷಯಕ್ಕೆ ಇಷ್ಟಾಯಿತು. ಗ್ರಂಥವೊಂದರ ಆಂತರಿಕ ಪರೀಕ್ಷೆಯು ಅದರ ಓದುಗರ ಹೆಚ್ಚಿನ ಭಾಗದ ಮೇಲೆ ಅದು ಯಾವ ಪರಿಣಾಮವನ್ನು ಉಂಟುಮಾಡಿದೆ ಎಂಬುದನ್ನು ಕಂಡುಕೊಳ್ಳುವುದರಲ್ಲಿದೆ. ಈ ಎರಡು ವಿಧಾನಗಳಲ್ಲಿ ಯಾವುದರಿಂದ ತೀರ್ಮಾನಿಸಿದರೂ ಅತ್ಯಂತ ಶ್ರೇಷ್ಠವಾದ ಒಂದು ಗ್ರಂಥವಾಗಿ ರಾಮಾಯಣದ ಸ್ಥಾನ ದುರಾಸದವಾಗಿದೆ. ಆದರೆ ಅದು ಸಂಪೂರ್ಣವಾಗಿ ನಿರ್ದುಷ್ಟವಾಗಿದೆ ಎನ್ನುವುದು ಇದರ ಅರ್ಥವಲ್ಲ. ಆದರೆ ರಾಮಾಯಣವು ಲಕ್ಷಾಂತರ ಮಂದಿಗೆ ಶಾಂತಿಯನ್ನು ನೀಡಿದೆ, ಶ್ರದ್ಧೆಯಿಲ್ಲದವರಿಗೆ ಅದನ್ನು ಒದಗಿಸಿದೆ, ಮತ್ತು ನಾಸ್ತಿಕತೆಯ ಬೆಂಕಿಯಲ್ಲಿ ಬೇಯುತ್ತಿರುವ ಸಾವಿರಾರು ಮಂದಿಗೆ ಅದು ಇಂದು ಸಹ ಒಂದು ಶಾಮಕ ಮುಲಾಮಾಗಿ ಉಪಯುಕ್ತವಾಗುತ್ತಿದೆ ಎಂದು ಅದರ ಪರವಾಗಿ ವಾದಿಸಲಾಗುತ್ತಿದೆ. ಅದರ ಪ್ರತಿ ಪುಟವೂ ಭಕ್ತಿಯಿಂದ ಉಕ್ಕಿ ಹರಿಯುತ್ತಿದೆ. ಅದು ಆಧ್ಯಾತ್ಮಿಕ ಅನುಭವದ ಒಂದು ನಿಜವಾದ ಗಣಿ.

ದುಷ್ಟಬುದ್ಧಿಯ ಜನ ತಮ್ಮ ದುರಾಚಾರಗಳನ್ನು ಸಮರ್ಥಿಸಿಕೊಳ್ಳಲು ಕೆಲವು ಸಲ ರಾಮಾಯಣವನ್ನು ಬಳಸಿಕೊಳ್ಳುತ್ತಾರೆನ್ನುವುದು ನಿಜ. ಆದರೆ ಅದು ರಾಮಾಯಣದಲ್ಲಿನ ದುರ್ಗುಣಕ್ಕೆ ಸಾಕ್ಷ್ಯವಲ್ಲ. ನನಗನಿಸುವಂತೆ ತುಲಸಿದಾಸರು ಉದ್ದೇಶರಹಿತವಾಗಿ ಸ್ತ್ರೀಯರಿಗೆ ಅನ್ಯಾಯ ಮಾಡಿದ್ದಾರೆ. ಇದರಲ್ಲಿ ಹಾಗೂ ಇತರ ಇನ್ನು ಕೆಲವು ವಿಷಯಗಳಲ್ಲಿ ಅವರು ತಮ್ಮ ಯುಗದ ಪ್ರಚಲಿತ ಭಾವನೆಗಳನ್ನು ಮೀರಿ ಏರಲು ವಿಫಲರಾಗಿದ್ದಾರೆ. ಬೇರೆ ಮಾತುಗಳಲ್ಲಿ ಹೇಳಬೇಕಾದಲ್ಲಿ, ತುಲಸಿದಾಸರು ಒಬ್ಬ ಸುಧಾರಕರಾಗಿರಲಿಲ್ಲ; ಅವರು ಕೇವಲ ಒಬ್ಬ ಭಕ್ತಾಗ್ರಣಿಯಾಗಿದ್ದರು. ರಾಮಾಯಣದ ದೋಷಗಳು ತುಲಸಿದಾಸರ

ಮೇಲೆ ಟೀಕೆಯಾಗಿರುವುದಕ್ಕಿಂತ ಹೆಚ್ಚಾಗಿ ಅವರು ಬದುಕಿದ್ದ ಯುಗದ ಮೇಲಿನ ಟೀಕೆಯಾಗಿವೆ.

ಇಂಥ ಪರಿಸ್ಥಿತಿಗಳಲ್ಲಿ, ಸ್ತ್ರೀಯರ ಸ್ಥಾನದ ಬಗ್ಗೆ ಅಥವಾ ತುಲಸಿದಾಸರ ಬಗ್ಗೆ ಸುಧಾರಕನ ದೃಷ್ಟಿ ಯಾವುದಾಗಿರಬೇಕು? ತುಲಸಿದಾಸರಿಂದ ಅವನು ಸ್ವಲ್ಪವೂ ಸಹಾಯ ಪಡೆಯಲಾರನೇ? ಇದಕ್ಕೆ ಉತ್ತರ ಸ್ಪಷ್ಟವಾಗಿ "ಅವನು ಪಡೆಯಬಲ್ಲ" ಎನ್ನುವುದು. ರಾಮಾಯಣದಲ್ಲಿ ಸ್ತ್ರೀಯರನ್ನು ಕುರಿತು ಹೀನಾಯದ ಟೀಕೆಗಳಿದ್ದರೂ, ತುಲಸಿದಾಸರು ಅದರಲ್ಲಿ ಜಗತ್ತಿಗೆ ಸೀತೆಯ ಅಸದೃಶ ಚಿತ್ರವನ್ನು ನೀಡಿದ್ದಾರೆಂಬುದನ್ನು ಮರೆಯಕೂಡದು. ಸೀತೆ ಇಲ್ಲದಿದ್ದಲ್ಲಿ ರಾಮನು ಎಲ್ಲಿರುತ್ತಾನೆ? ರಾಮಾಯಣದಲ್ಲಿ ಕೌಸಲ್ಯೆ, ಸುಮಿತ್ರೆ ಮುಂತಾದ ಇತರ ಉದಾತ್ತ ವ್ಯಕ್ತಿಗಳ ಒಂದು ದೊಡ್ಡ ಗುಂಪನ್ನೇ ನಾವು ನೋಡುತ್ತೇವೆ. ಶಬರಿ ಮತ್ತು ಅಹಲ್ಯೆಯರ ಶ್ರದ್ಧಾಭಕ್ತಿಗಳಿಗೆ ನಾವು ಗೌರವದಿಂದ ತಲೆ ಬಾಗಿಸುತ್ತೇವೆ. ರಾವಣ ಒಬ್ಬ ರಾಕ್ಷಸ, ಆದರೆ ಮಂಡೋದರಿ ಒಬ್ಬ ಸತಿ ಆಗಿದ್ದಳು. ನನ್ನ ಅಭಿಪ್ರಾಯದಲ್ಲಿ ಈ ನಿದರ್ಶನಗಳು ತುಲಸಿದಾಸರು ದೃಢನಂಬಿಕೆಯಿಂದ ಸ್ತ್ರೀದೂಷಕರಾಗಿರಲಿಲ್ಲ ಎನ್ನುವುದನ್ನು ರುಜುವಾತು ಮಾಡುತ್ತವೆ. ಇದಕ್ಕೆ ವಿರುದ್ಧವಾಗಿ ಅವರ ನಂಬಿಕೆಗಳ ಮಟ್ಟಿಗೆ ಹೇಳುವುದಾದರೆ, ಅವರಿಗೆ ಹೆಂಗಸರ ವಿಷಯದಲ್ಲಿ ಕೇವಲ ಗೌರವ ಮಾತ್ರ ಇದ್ದಿತು. ಹೆಂಗಸರ ಬಗ್ಗೆ ತುಲಸಿದಾಸರ ದೃಷ್ಟಿಯ ಬಗ್ಗೆ ಇಷ್ಟು ಸಾಕು.

ಆದರೆ ವಾಲಿಯ ವಧೆಯ ವಿಷಯದಲ್ಲಿ ಭಿನ್ನಾಭಿಪ್ರಾಯಕ್ಕೆ ಅವಕಾಶವಿದೆ. ವಿಭೀಷಣನಲ್ಲಿ ನನಗೆ ಯಾವ ದೋಷವೂ ಕಾಣಿಸುವುದಿಲ್ಲ. ವಿಭೀಷಣ ತನ್ನ ಅಣ್ಣನ ವಿರುದ್ಧ ಸತ್ಯಾಗ್ರಹ ನಡೆಸಿದ. ತಮ್ಮ ಪ್ರಭುಗಳ ಅಥವಾ ದೇಶದ ದೋಷಗಳಿಗೆ ಸಹಾನುಭೂತಿ ತೋರಿಸುವುದು ಅಥವಾ ಅವನ್ನು ಮುಚ್ಚಿಡಲು ಪ್ರಯತ್ನಿಸುವುದು ದೇಶಪ್ರೇಮದ ವೈಪರೀತ್ಯ ಮತ್ತು ಅವನ್ನು ವಿರೋಧಿಸುವುದೇ ನಿಜವಾದ ದೇಶಪ್ರೇಮ ಎನ್ನುವುದನ್ನು ಅವನ ದೃಷ್ಟಾಂತ ನಮಗೆ ಬೋಧಿಸುತ್ತದೆ. ರಾಮನಿಗೆ ಸಹಾಯ ಮಾಡುವ ಮೂಲಕ ವಿಭೀಷಣನು ತನ್ನ ದೇಶಕ್ಕೆ ನಿಜವಾದ ಸೇವೆ ಸಲ್ಲಿಸಿದ. ಸೀತೆಯ ವಿಷಯದಲ್ಲಿ ರಾಮನ ಹೃದಯ ಶೂನ್ಯತೆಯನ್ನು ಸೂಚಿಸುವುದಿಲ್ಲ. ರಾಜನ ಕರ್ತವ್ಯ ಮತ್ತು ಹೆಂಡತಿಯ ಮೇಲೆ ಗಂಡನ ಪ್ರೀತಿ ಇವುಗಳ ನಡುವಣ ಘರ್ಷಣೆಗೆ ಅದೊಂದು ಸಾಕ್ಷಿ.

ರಾಮಾಯಣಕ್ಕೆ ಸಂಬಂಧಿಸಿದಂತೆ ನಿಜವಾದ ಸಂಶಯಗಳನ್ನು ಹೊಂದಿರುವ ಸಂದೇಹವಾದಿಗಳಿಗೆ, ಅವರು ಯಾರದೇ ವ್ಯಾಖ್ಯಾನಗಳನ್ನು ಯಾಂತ್ರಿಕವಾಗಿ ಗ್ರಹಿಸಕೂಡದು ಎಂದು ನಾನು ಸೂಚಿಸುತ್ತೇನೆ. ತಮಗೆ ಸಂದೇಹ ಹುಟ್ಟಿಸುವ

ಭಾಗಗಳನ್ನು ಅವರು ತ್ಯಜಿಸಬೇಕು. ಸತ್ಯ ಅಹಿಂಸೆಗಳಿಗೆ ವಿರುದ್ಧವಾದ ಯಾವುದನ್ನೇ ಅವರು ಕ್ಷಮಿಸಕೂಡದು. ನಮ್ಮ ಅಭಿಪ್ರಾಯದಲ್ಲಿ ರಾಮನು ಮೋಸ ಮಾಡಿದನೆಂಬ ಕಾರಣಕ್ಕಾಗಿ ನಾವೂ ಹಾಗೆಯೇ ಮಾಡಬಹುದು ಎಂದು ವಾದಿಸುವುದು ಶುದ್ಧ ವಕ್ರತನ. ರಾಮನು ಮೋಸಮಾಡಲಾಗದವನು ಎಂದು ನಂಬುವುದೇ ಸರಿಯಾದ ದೃಷ್ಟಿ. ಗೀತೆಯು ಹೇಳುವಂತೆ, "ಜಗತ್ತಿನಲ್ಲಿ ಸಂಪೂರ್ಣವಾಗಿ ನಿರ್ದುಷ್ಟವಾದುದು ಯಾವುದೂ ಇಲ್ಲ". ಆದ್ದರಿಂದ ನಾವು, ನೀರನ್ನು ತೊರೆದು ಹಾಲನ್ನು ಮಾತ್ರ ಗ್ರಹಿಸುವ ಕತೆಯ ಹಂಸದಂತೆ, ಪ್ರತಿಯೊಂದರಲ್ಲೂ ಒಳ್ಳೆಯದನ್ನು ಮಾತ್ರ ಸಂಗ್ರಹಿಸಿ ಕೆಟ್ಟದನ್ನು ತ್ಯಜಿಸುವುದನ್ನು ಕಲಿಯೋಣ. ದೇವರ ವಿನಾ ಇನ್ನಾವುದೂ ಇಲ್ಲ. ಇನ್ನಾರೂ ಪರಿಪೂರ್ಣರಲ್ಲ.

*ಯಂಗ್ ಇಂಡಿಯಾ*, 31 ಅಕ್ಟೋಬರ್ 1929



# 14

# ವಾರದ ಪತ್ರ

## (ಇತರ ಪ್ರಶ್ನೆಗಳು)

[ಗಾಂಧೀಜಿ ಯಾವುದಾದರೂ ಆಧ್ಯಾತ್ಮಿಕ ಸಾಧನೆಗಳನ್ನು ಅನುಸರಿಸುತ್ತಿದ್ದರೇ ಮತ್ತು ಯಾವುದರ ವಿಶೇಷ ಅಧ್ಯಯನ ಅವರಿಗೆ ಸಹಾಯಕವಾಗಿ ತೋರಿತ್ತು ಎಂಬುದನ್ನು ತಿಳಿದುಕೊಳ್ಳಲು ಕುತೂಹಲಿಗಳಾಗಿದ್ದ ಮಿ. ಬೇಸಿಲ್ ಮ್ಯಾಥ್ಯೂಸರೊಂದಿಗೆ ಗಾಂಧೀಜಿಯವರ ಸಂಭಾಷಣೆ]

*ಗಾಂಧೀಜಿ:* ನನಗೆ ಯೋಗಸಾಧನೆಗಳ ಪರಿಚಯವಿಲ್ಲ. ನಾನು ಅನುಸರಿಸುವ ಸಾಧನೆ ಚಿಕ್ಕಂದಿನಲ್ಲಿ ನನ್ನ ದಾದಿಯಿಂದ ಕಲಿತ ಒಂದು ಅಭ್ಯಾಸ. ನನಗೆ ದೆವ್ವಗಳ ವಿಷಯದಲ್ಲಿ ಭಯವಿತ್ತು. "ದೆವ್ವಗಳಿಲ್ಲ, ಆದರೆ ನಿನಗೆ ಹೆದರಿಕೆಯಾದರೆ ರಾಮನಾಮವನ್ನು ಜಪಿಸು" ಎಂದು ಅವಳು ನನಗೆ ಹೇಳುತ್ತಿದ್ದಳು. ನಾನು ಚಿಕ್ಕಂದಿನಲ್ಲಿ ಕಲಿತದ್ದು ನನ್ನ ಮನೋಭೂಮಿಕೆಯಲ್ಲಿ ಒಂದು ಮಹತ್ವದ ವಿಷಯ ಆಗಿದೆ. ನನ್ನ ಕಗ್ಗತ್ತಲೆಯ ಕ್ಷಣವನ್ನು ಬೆಳಗಿಸಿದ ಸೂರ್ಯ ಅದು. ಇದೇ ನೆಮ್ಮದಿಯನ್ನು ಒಬ್ಬ ಕ್ರೈಸ್ತ ಜೇಸಸನ ನಾಮಪಾರಾಯಣದಿಂದ ಮತ್ತು ಒಬ್ಬ ಮುಸ್ಲಿಂ, ಅಲ್ಲಾನ ಹೆಸರಿನಿಂದ ಪಡೆಯಬಹುದು. ಈ ಎಲ್ಲವೂ ಒಂದೇ ಅರ್ಥವನ್ನು ಹೊಂದಿವೆ ಮತ್ತು ಅದೇ ಪರಿಸ್ಥಿತಿಗಳಲ್ಲಿ ಅದೇ ಪರಿಣಾಮಗಳನ್ನು ಅವು ಉಂಟುಮಾಡುತ್ತವೆ. ಆದರೆ ಮಾತ್ರ ಈ ಜಪ ತುಟಿಯ ಒಂದು ಕ್ರಿಯೆಯಾಗಿರದೆ ನಿಮ್ಮ ನಿಜಸ್ವರೂಪದ ಒಂದು ಭಾಗವಾಗಿರಬೇಕು.

ಸಹಾಯಕ ಅಧ್ಯಯನಗಳಿಗಾಗಿ, ನಾವು ನಿಯತವಾದ ಭಗವದ್ಗೀತೆಯ ಪಠನವನ್ನು ಇಟ್ಟುಕೊಂಡಿದ್ದೇವೆ. ಈಗ ನಾವು ಪ್ರತಿದಿನ ಬೆಳಿಗ್ಗೆ ಗೊತ್ತುಪಡಿಸಿದ

ಅಧ್ಯಾಯಗಳನ್ನು ಓದುವ ಮೂಲಕ ಗೀತೆಯನ್ನು ಪ್ರತಿವಾರವೂ ಆಯಾ ಅಧ್ಯಾಯ ಮುಗಿಸುವ ಹಂತವನ್ನು ತಲುಪಿದ್ದೇವೆ. ಆಮೇಲೆ ನಾವು ಭಾರತದ ವಿವಿಧ ಸಂತರ ಸ್ತೋತ್ರಗಳನ್ನು ಪಠಿಸುತ್ತೇವೆ. ಅವುಗಳಲ್ಲಿ ನಾವು ಕ್ರೈಸ್ತ ಸ್ತೋತ್ರ ಗ್ರಂಥದಲ್ಲಿನ ಸ್ತೋತ್ರಗಳನ್ನೂ ಸೇರಿಸುತ್ತೇವೆ. ಖಾನ್ ಸಾಹೇಬರು ನಮ್ಮೊಡನೆ ಇರುವುದರಿಂದ ನಾವು ಕುರಾನಿನಿಂದಲೂ ಪಠನ ಮಾಡಿಸುತ್ತೇವೆ. ಸರ್ವಧರ್ಮಗಳ ಸಮಾನತೆಯಲ್ಲಿ ನಾವು ನಂಬಿದ್ದೇವೆ. ತುಲಸಿದಾಸರ ರಾಮಾಯಣವನ್ನು ಓದುವುದರಿಂದ ನಾನು ಅತಿ ಹೆಚ್ಚಿನ ಮನಸ್ಸಮಾಧಾನ ಪಡೆಯುತ್ತೇನೆ. ಹೊಸ ಒಡಂಬಡಿಕೆ ಮತ್ತು ಕುರಾನುಗಳಿಂದಲೂ ನಾನು ಸಮಾಧಾನ ಪಡೆದಿದ್ದೇನೆ. ನಾನು ಅವನ್ನು ವಿಮರ್ಶಕ ದೃಷ್ಟಿಯಿಂದ ನೋಡುವುದಿಲ್ಲ. ಅವು ನನಗೆ ಭಗವದ್ಗೀತೆಯಷ್ಟೇ ಮುಖ್ಯವಾದವು. ಆದರೆ ಗೀತೆಯಲ್ಲಿನ ಎಲ್ಲವೂ ನನಗೆ ಹಿಡಿಸುವುದಿಲ್ಲ. ಅಂತೆಯೇ, ಉದಾಹರಣೆಗೆ ಪಾಲನ ಪತ್ರಗಳಲ್ಲಿನ ಎಲ್ಲವೂ ಹಾಗೂ ತುಲಸಿದಾಸರಲ್ಲಿನ ಎಲ್ಲವೂ. ಗೀತೆಯು ಯಾವುದೇ ಅಲಂಕಾರಗಳಿಲ್ಲದೆ ನೀಡಿದ ಒಂದು ಶುದ್ಧ ಧಾರ್ಮಿಕ ಉಪನ್ಯಾಸ. ಅದು ಪರಮಧ್ಯೇಯದೆಡೆಗೆ ಯಾತ್ರೆ ಹೊರಟಿರುವ ಜೀವಾತ್ಮನ ಪ್ರಗತಿಯನ್ನು ಸರಳವಾಗಿ ವರ್ಣಿಸುತ್ತದೆ. ಆದ್ದರಿಂದ ಆಯ್ಕೆ ಮಾಡುವುದರ ಪ್ರಶ್ನೆಯೇ ಇಲ್ಲ.

ಮಿ. ಮ್ಯಾಥ್ಯೂಸ್ : ನಿವು ನಿಜವಾಗಿ ಒಬ್ಬ ಪ್ರಾಟೆಸ್ಟಂಟ್.

*ಗಾಂಧೀಜಿ* : ನಾನು ಏನು ಅಥವಾ ಏನಲ್ಲ ಎನ್ನುವುದು ನನಗೆ ಗೊತ್ತಿಲ್ಲ. ಮಿ.ಹಾಡ್ಜ್ ನನ್ನನ್ನು ಒಬ್ಬ ಪ್ರೆಸ್ಬಿಟಿರಿಯನ್ ಎಂದು ಕರೆಯುತ್ತಾರೆ!

ಮಿ. ಮ್ಯಾಥ್ಯೂಸ್ : ನಿಮಗೆ ಪ್ರಮಾಣದ ಮೂಲ ಯಾವುದು?

*ಗಾಂಧೀಜಿ* : (ತಮ್ಮ ಎದೆಯನ್ನು ತೋರಿಸುತ್ತಾ) ಅದು ಇಲ್ಲಿದೆ. ಗೀತೆಯನ್ನು ಒಳಗೊಂಡಂತೆ ಪ್ರತಿಯೊಂದು ಧರ್ಮಗ್ರಂಥವನ್ನೂ ನಾನು ನನ್ನ ವಿವೇಚನೆಗೆ ಒಳಪಡಿಸುತ್ತೇನೆ. ದರ್ಮಗ್ರಂಥವೊಂದು ನನ್ನ ವಿವೇಚನೆಯನ್ನು ಮೀರಲು ನಾನು ಅವಕಾಶಕೊಡಲಾರೆ. ಮುಖ್ಯಗ್ರಂಥಗಳು ಸ್ಫೂರ್ತಿಯಿಂದ ಕೂಡಿವೆ ಎಂದು ನಾನು ನಂಬಿದರೂ, ಅವು ಇಮ್ಮಡಿ ಬಟ್ಟಿಯಿಂದ ಹಾನಿಗೊಳಗಾಗಿವೆ. ಮೊದಲನೆಯದಾಗಿ, ಅವು ಒಬ್ಬ ಮಾನವ ಪ್ರವಾದಿಯ ಮೂಲಕ ಬಂದಿವೆ, ಮತ್ತು ಆಮೇಲೆ ವ್ಯಾಖ್ಯಾನಕಾರರ ಭಾಷ್ಯಗಳ ಮೂಲಕ ಬಂದಿವೆ. ಅವುಗಳಲ್ಲಿ ಯಾವುದೇ ವಿಷಯ ದೇವರಿಂದ ನೇರವಾಗಿ ಬರುವುದಿಲ್ಲ. ಬೈಬಲಿನ ವಾಕ್ಯವೊಂದರ ಒಂದು ಪಾಠವನ್ನು ಮ್ಯಾಥ್ಯೂ ಕೊಡಬಹುದು; ಜಾನ್ ಇನ್ನೊಂದು ಪಾಠವನ್ನು ಕೊಡಬಹುದು. ದೈವೀ ಪ್ರಕಾಶನವನ್ನು ನಾನು ಒಪ್ಪಿದರೂ ನನ್ನ ವಿವೇಚನೆಯನ್ನು ನಾನು ಒಪ್ಪಿಸಿಬಿಡಲಾರೆ. ಎಲ್ಲಕ್ಕಿಂತಲೂ

ಹೆಚ್ಚಾಗಿ, "ಅಕ್ಷರ ಕೊಲ್ಲುತ್ತದೆ, ಭಾವ ಜೀವ ನೀಡುತ್ತದೆ". ಆದರೆ ನೀವು ನನ್ನ ನಿಲವನ್ನು ತಪ್ಪಾಗಿ ಗ್ರಹಿಸಬಾರದು. ನನಗೆ ಶ್ರದ್ಧೆಯಲ್ಲೂ ನಂಬಿಕೆ ಇದೆ, ತರ್ಕಕ್ಕೆ ಸ್ಥಾನವಿಲ್ಲದ – ಉದಾ: ದೇವರ ಅಸ್ತಿತ್ವ – ವಿಷಯಗಳಲ್ಲಿ. ಯಾವುದೇ ವಾದ ನನ್ನನ್ನು ಆ ಶ್ರದ್ಧೆಯಿಂದ ವಿಚಲಗೊಳಿಸಲಾರದು. ಎಲ್ಲ ತರ್ಕಕ್ಕೂ ವಿರುದ್ಧವಾಗಿ "ಆದರೂ ನಾವು ಏಳು ಜನ" ಎಂದು ಪುನರುಚ್ಚರಿಸಿದ ಆ ಚಿಕ್ಕ ಹುಡುಗಿಯಂತೆ, ನನಗಿಂತ ಬಹಳ ಉತ್ತಮವಾದ ಬುದ್ಧಿಯುಳ್ಳವನೊಬ್ಬನ ವಾದದಿಂದ ತಬ್ಬಿಬ್ಬಾದಾಗ ನಾನು "ಆದರೂ ದೇವರಿದ್ದಾನೆ" ಎಂದು ಪುನರುಚ್ಚರಿಸಲು ಇಚ್ಛಿಸುತ್ತೇನೆ.

ಹರಿಜನ, 5 ಡಿಸೆಂಬರ್ 1936



# 15

# ವಾರದ ಪತ್ರ

## (ರಾವ್ ಬಹದೂರ್ ರಾಜರೊಡನೆ ಒಂದು ಸಂಭಾಷಣೆ)

ಹಿಂದೂಧರ್ಮದ ಅತ್ಯಂತ ಪರಿಶುದ್ಧ ರೂಪದಲ್ಲಿ ಒಬ್ಬ ಬ್ರಾಹ್ಮಣ, ಒಂದು ಇರುವೆ, ಒಂದು ಆನೆ ಮತ್ತು ಒಬ್ಬ ಶ್ವಪಚ ಸಮಾನಸ್ಥಾನ ಹೊಂದಿರುತ್ತಾರೆ. ನಮ್ಮ ತತ್ವಶಾಸ್ತ್ರ ಅಷ್ಟು ಉನ್ನತವಾಗಿರುವುದರಿಂದ ಮತ್ತು ನಾವು ಅದಕ್ಕೆ ಅನುಸಾರವಾಗಿ ಜೀವನ ನಡೆಸದಿರುವುದರಿಂದ, ಇಂದು ಆ ತತ್ವ ಸಿದ್ಧಾಂತವೇ ನಮಗೆ ಅಸಹ್ಯವಾಗಿದೆ. ಹಿಂದೂಧರ್ಮವು ಇಡೀ ಮಾನವಕುಲಕ್ಕೆ ಮಾತ್ರ ಸೀಮಿತವಾದುದಲ್ಲ ಜೀವಂತವಾಗಿರುವ ಎಲ್ಲದರ ಭ್ರಾತೃತ್ವವನ್ನು ಅದು ಒತ್ತಿ ಹೇಳುತ್ತದೆ. ಮನುಷ್ಯ ಮನುಷ್ಯನ ನಡುವೆ ನಾವು ನಿಜವಾದ ಜೀವಂತವಾದ ಸಮಾನತೆಯನ್ನು ಪುನಃಸ್ಥಾಪಿಸಿದ ಕ್ಷಣವೇ ಮಾನವನ ಮತ್ತು ಇಡೀ ಸೃಷ್ಟಿಯ ನಡುವೆ ಸಮಾನತೆಯನ್ನು ಸ್ಥಾಪಿಸಲು ನಾವು ಶಕ್ತರಾಗುತ್ತೇವೆ. ಆ ದಿನ ಬಂದಾಗ ನಾವು ಭೂಮಿಯ ಮೇಲೆ ಶಾಂತಿಯನ್ನು ಮತ್ತು ಮನುಷ್ಯರ ಬಗ್ಗೆ ಸದ್ಭಾವನೆಯನ್ನು ಹೊಂದುತ್ತೇವೆ.

ಹರಿಜನ, 28 ಮಾರ್ಚ್ 1936



# 16

# ವಾರದ ಪತ್ರ

## (ಚಿನ್ನದ ಕೀಲಿಕೈ)

ಕ್ವಿಲಾನಿನ ಸಾರ್ವಜನಿಕ ಸಭೆಯಲ್ಲಿ ಗಾಂಧೀಜಿ ಮೊದಲ ಬಾರಿಗೆ ಹಿಂದೂಧರ್ಮದ ಸಿದ್ಧಾಂತವನ್ನು ಉಪನಿಷತ್ತಿನ ಮಂತ್ರವೊಂದರಲ್ಲಿ ಸಂಗ್ರಹಿಸಿದರು. ತರುವಾಯ ಪ್ರತಿ ಸಭೆಯಲ್ಲಿಯೂ ಆ ಸರ್ವವ್ಯಾಪಕ ಮಂತ್ರದ ಅನೇಕಾನೇಕ ಅರ್ಥಗಳ ಮೇಲೆ ಸ್ಪಷ್ಟವಾದ ಸರಳ ವ್ಯಾಖ್ಯಾನಗಳನ್ನು ನೀಡಿದರು. ಹಿಂದಿನ ದಿನ ಕ್ವಿಲಾನಿನಲ್ಲಿ ಹೆಚ್ಚು ವ್ಯಾಖ್ಯಾನವಿಲ್ಲದೆ ಅದರ ಕೇವಲ ನಿರೂಪಣೆಯನ್ನು ನೀಡಲಾಗಿತ್ತು. ಅದನ್ನು ಈ ಕೆಳಗೆ ಯಥಾವತ್ತಾಗಿ ಕೊಟ್ಟಿದೆ:

> ಹಿಂದೂಧರ್ಮದ ಸ್ವರೂಪ ಏನು? ನಮಗೆ ಐತಿಹಾಸಿಕ ದಾಖಲೆ ದೊರೆತಿರುವ ಅಷ್ಟೊಂದು ಸಂತರಿಗೆ ಸ್ಫೂರ್ತಿನೀಡಿದ್ದು ಯಾವುದು? ಎಂಬುದನ್ನು ಅವಲೋಕಿಸಲು ನನಗೆ ಕೆಲವು ಕ್ಷಣ ಅವಕಾಶಕೊಡಿ. ಅದು ಪ್ರಪಂಚಕ್ಕೆ ಏಕೆ ಅಷ್ಟೊಂದು ದಾರ್ಶನಿಕರನ್ನು ನೀಡಿದೆ. ಅದರ ಭಕ್ತರಿಗೆ ಶತಮಾನಗಳ ಕಾಲ ಅಷ್ಟು ಉತ್ಸಾಹ ತುಂಬಿದ ಹಿಂದೂಧರ್ಮದಲ್ಲಿನ ಅಂಶ ಯಾವುದು? ಹಿಂದೂಧರ್ಮದಲ್ಲಿ ಅವರು ಅಸ್ಪೃಶ್ಯತೆಯನ್ನು ಕಂಡಿದ್ದರೇ? ಆದರೂ ಅದರಲ್ಲಿ ಉತ್ಸಾಹ ತೋರಿದ್ದರೇ? ಅಸ್ಪೃಶ್ಯತೆಯ ವಿರುದ್ಧ ನನ್ನ ಹೋರಾಟದ ನಡುವೆ ಹಿಂದೂಧರ್ಮದ ಸಾರ ಏನು ಎಂದು ಅನೇಕ ಕಾರ್ಯಕರ್ತರು ನನ್ನನ್ನು ಕೇಳಿದ್ದಾರೆ. ನಮಗೆ ಇಸ್ಲಾಮಿನಲ್ಲಿ ಸಿಗುವಂತೆ ಯಾವುದೇ ಸರಳ ಕಲ್ಮಾ ಇಲ್ಲ, ಬೈಬಲಿನ ಜಾನ್ 3.16 ಇಲ್ಲ ಎಂದು ಅವರು ಹೇಳಿದರು. ಹಿಂದೂಗಳಲ್ಲಿ ಶ್ರೇಷ್ಠ ತಾತ್ವಿಕರು ಅಥವಾ ಅತ್ಯಂತ ಸಾಮಾನ್ಯರು ಕೇಳುವ ಪ್ರಶ್ನೆಗಳಿಗೆ ಉತ್ತರ ನೀಡುವಂಥದು

ಯಾವುದಾದರೂ ನಮ್ಮಲ್ಲಿ ಇದೆಯೇ ಅಥವಾ ಇಲ್ಲವೇ? ಗಾಯತ್ರಿ ಆ ಉದ್ದೇಶವನ್ನು ಸಾಧಿಸುತ್ತದೆ ಎಂದು ಕೆಲವರು ಹೇಳುತ್ತಾರೆ. ಅದಕ್ಕೆ ಸರಿಯಾದ ಕಾರಣ ಇಲ್ಲದೆಯೂ ಇಲ್ಲ. ಗಾಯತ್ರಿಮಂತ್ರದ ಅರ್ಥವನ್ನು ಅರಿತು ನಾನು ಪ್ರಾಯಶಃ ಸಾವಿರ ಸಲ ಅದನ್ನು ಜಪಿಸಿದ್ದೇನೆ. ಆದರೂ ಅದು ನನ್ನ ಎಲ್ಲಾ ಮಹದಾಕಾಂಕ್ಷೆಗಳಿಗೆ ಸಾಕಾಗಲಿಲ್ಲ ಎಂದು ನನಗೆ ತೋರಿದೆ. ಆಮೇಲೆ, ನಿಮಗೆ ಗೊತ್ತಿರುವಂತೆ, ಕೆಲವು ವರ್ಷಗಳ ಹಿಂದಿನಿಂದ ನಾನು ಭಗವದ್ಗೀತೆಯನ್ನು ಪಟ್ಟಾಗಿ ಹಿಡಿದಿದ್ದೇನೆ. ಅದು ನನ್ನ ಎಲ್ಲಾ ಸಮಸ್ಯೆಗಳಿಗೂ ಉತ್ತರ ನೀಡುತ್ತದೆ ಮತ್ತು ಸಂದೇಹದ ಮತ್ತು ತೊಂದರೆಯ ನೂರಾರು ವೇಳೆಗಳಲ್ಲಿ ಅದು ನನ್ನ ಕಾಮಧೇನು, ಮಾರ್ಗದರ್ಶಕ, ಸರ್ವಾರ್ಥಸಾಧಕ ಆಗಿದೆ ಎಂದು ಹೇಳಿದ್ದೇನೆ. ಅದು ನನ್ನನ್ನು ಕೈಬಿಟ್ಟ ಒಂದೇ ಒಂದು ಸಂದರ್ಭವೂ ನನಗೆ ನೆನಪಿಲ್ಲ. ಆದರೆ ಅದು ಈ ಇಡೀ ಶ್ರೋತೃವರ್ಗದ ಮುಂದೆ ನಾನು ಇಡಬಹುದಾದ ಗ್ರಂಥವಲ್ಲ. ಈ ಕಾಮಧೇನು ತನ್ನ ಕೆಚ್ಚಲಿನಲ್ಲಿ ಇಟ್ಟುಕೊಂಡಿರುವ ಸಮೃದ್ಧವಾದ ಹಾಲನ್ನು ನೀಡುವುದಕ್ಕೆ ಮೊದಲು ಅದರ ಭಕ್ತಿಪೂರ್ವಕ ಅಧ್ಯಯನ ಅವಶ್ಯಕವಾಗಿದೆ.

ಆದರೆ ಹಿಂದೂಧರ್ಮದ ಸಾರಸರ್ವಸ್ವವನ್ನು ಒಳಗೊಂಡಿರುವಂತಹ ಒಂದು ಮಂತ್ರವನ್ನು ನಾನು ಆಯ್ಕೆ ಮಾಡಿದ್ದೇನೆ. ಅದನ್ನು ನಿಮ್ಮೆದುರು ಪಠಿಸುವವನಿದ್ದೇನೆ. ನಿಮ್ಮಲ್ಲಿ ಅನೇಕರಿಗೆ ಈಶೋಪನಿಷತ್ತು ಗೊತ್ತಿದೆಯೆಂದು ಭಾವಿಸುತ್ತೇನೆ. ಅನೇಕ ವರ್ಷಗಳ ಹಿಂದೆ ನಾನು ಅದನ್ನು ಅದರ ಅನುವಾದ ಮತ್ತು ವ್ಯಾಖ್ಯಾನ ಸಹಿತ ಓದಿದೆ. ಯರವಾಡ ಜೈಲಿನಲ್ಲಿ ಅದನ್ನು ಬಾ ಯಿಪಾಠ ಮಾಡಿದೆ. ನನ್ನನ್ನು ಕೆಲವು ತಿಂಗಳುಗಳ ಹಿಂದೆ ಮನ ಸೆಳೆದಿದ್ದಕ್ಕಿಂತ ಹೆಚ್ಚಾಗಿ ಅದು ಈಗ ನನ್ನ ಮನಸೆಳೆದಿದೆ. ಎಲ್ಲಾ ಉಪನಿಷತ್ತುಗಳು ಮತ್ತು ಇತರ ಎಲ್ಲಾ ದರ್ಮಗ್ರಂಥಗಳು ಇದ್ದಕ್ಕಿದ್ದಂತೆ ಬೂದಿಯಾಗಿಬಿಟ್ಟು, ಈಶೋಪನಿಷತ್ತಿನ ಮೊದಲನೆಯ ಶ್ಲೋಕ ಮಾತ್ರ ಯಥಾವತ್ತಾಗಿ ಹಿಂದೂಗಳ ನೆನಪಿನಲ್ಲಿ ಉಳಿಯುವಂತಾದರೆ, ಹಿಂದೂಧರ್ಮ ಎಂದೆಂದಿಗೂ ಬದುಕುತ್ತದೆ ಎಂಬ ಅಂತಿಮ ತೀರ್ಮಾನಕ್ಕೆ ನಾನು ಈಗ ಬಂದಿದ್ದೇನೆ.

ಈಗ ಈ ಮಂತ್ರ ನಾಲ್ಕು ಭಾಗಗಳಾಗಿದೆ. *ಈಶಾವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್* ಎನ್ನವುದು ಮೊದಲನೆಯ ಭಾಗ. ನಾನು ಅನುವಾದಿಸುವಂತೆ ಅದರ ಅರ್ಥ ಈ ವಿಶಾಲ ವಿಶ್ವದಲ್ಲಿ ನಾವು ನೋಡುವ ಈ ಎಲ್ಲವೂ ಈಶ್ವರನಿಂದ ವ್ಯಾಪಿಸಲ್ಪಟ್ಟಿದೆ. ತರುವಾಯ ಎರಡನೆಯ ಮತ್ತು ಮೂರನೆಯ ಭಾಗಗಳು ಬರುತ್ತವೆ.

ನಾನು ಅವನ್ನು ಓದುವಂತೆ ಅವು ಒಟ್ಟಿಗೆ - ಹೀಗೆ ಓದುತ್ತವೆ: *ತೇನ ತ್ಯಕ್ತೇನ ಭುಂಜೀಥಾ* ನಾನು ಇವನ್ನು ಎರಡಾಗಿ ವಿಭಾಗ ಮಾಡಿ ಹೀಗೆ ಅನುವಾದ ಮಾಡುತ್ತೇನೆ : ಅದನ್ನು ತ್ಯಾಗ ಮಾಡಿ ಮತ್ತು ಅದನ್ನು ಅನುಭೋಗಿಸಿ. ಇದೇ ಅರ್ಥ ನೀಡಿದರೂ, ಇದರ ಇನ್ನೊಂದು ಅನುವಾದವಿದೆ : ಅವನು (ಈಶ್ವರನು) ನೀಡುವುದನ್ನು ಅನುಭೋಗಿಸಿ. ಹೀಗೆ ಮಾಡಿದರೂ ಅದನ್ನು ನೀವು ಎರಡು ಭಾಗಗಳಾಗಿ ಒಡೆಯಬಹುದು. ಅನಂತರ ಕೊನೆಯ ಮತ್ತು ಅತ್ಯಂತ ಮಹತ್ವದ ಭಾಗ, *ಮಾ ಗೃಧಃ ಕಸ್ಯಸ್ವಿದ್ಧನಂ|* ಅದರ ಅರ್ಥ: ಯಾರದೇ ಐಶ್ವರ್ಯ ಅಥವಾ ಆಸ್ತಿಗಾಗಿ ಆಸೆ ಪಡಬೇಡ. ಆ ಪ್ರಾಚೀನ ಉಪನಿಷತ್ತಿನ ಉಳಿದ ಎಲ್ಲಾ ಮಂತ್ರಗಳೂ ಮೊದಲನೆಯ ಮಂತ್ರದ ವ್ಯಾಖ್ಯಾನ ಅಥವಾ ಅದರ ಸಂಪೂರ್ಣ ಅರ್ಥವನ್ನು ಕೊಡಲು ಒಂದು ಪ್ರಯತ್ನ. ಈ ಮಂತ್ರವನ್ನು ಗೀತೆಯ ಬೆಳಕಿನಲ್ಲಿ ಅಥವಾ ಗೀತೆಯನ್ನು ಈ ಮಂತ್ರದ ಬೆಳಕಿನಲ್ಲಿ ನಾನು ಓದುವಾಗ, ಗೀತೆಯು ಈ ಮಂತ್ರದ ಮೇಲಿನ ಒಂದು ವ್ಯಾಖ್ಯಾನ ಎಂದು ನನಗೆ ಕಂಡುಬರುತ್ತದೆ. ಅದು ಸೋಷಿಯಲಿಸ್ಟ್ ಮತ್ತು ಕಮ್ಯೂನಿಸ್ಟರ, ತತ್ವಶಾಸ್ತ್ರಜ್ಞ ಮತ್ತು ಅರ್ಥಶಾಸ್ತ್ರಜ್ಞರ ಹಂಬಲಗಳನ್ನು ತೃಪ್ತಿಗೊಳಿಸುವುದಾಗಿ ನನಗೆ ಕಾಣುತ್ತದೆ. ಹಿಂದೂಧರ್ಮಕ್ಕೆ ಸೇರದಿರುವ ಎಲ್ಲರ ಹಂಬಲಗಳನ್ನೂ ಅದು ತೃಪ್ತಿಪಡಿಸುತ್ತದೆ. ನಾನು ಅವರೆಲ್ಲರಿಗೂ ಸೂಚಿಸುವ ಸಾಹಸ ಮಾಡುತ್ತೇನೆ. ಇದು ನಿಜವಾದಲ್ಲಿ – ಇದು ನಿಜವೆಂದು ನಾನು ಭಾವಿಸುತ್ತೇನೆ – ಈ ಮಂತ್ರದ ಅರ್ಥಕ್ಕೆ ಅಸಮಂಜಸವಾದ ಅಥವಾ ವಿರುದ್ಧವಾದ ಯಾವುದನ್ನೇ ನೀವು ಹಿಂದೂಧರ್ಮದಲ್ಲಿ ಪರಿಗ್ರಹಿಸಬೇಕಾಗಿಲ್ಲ. ಇದಕ್ಕಿಂತ, ಎಂದರೆ ಸೃಷ್ಟಿಕರ್ತನಾದ, ಜೀವಿಸಿರುವ ಎಲ್ಲಕ್ಕೂ ಒಡೆಯನಾದ, ಒಬ್ಬ ದೇವರು ವಿಶ್ವವನ್ನು ವ್ಯಾಪಿಸಿದ್ದಾನೆ ಎನ್ನುವುದಕ್ಕಿಂತ, ಸಾಮಾನ್ಯ ಮನುಷ್ಯನೊಬ್ಬ ಇನ್ನೂ ಕಲಿಯಬೇಕು ಎನಿಸುವುದು ಯಾವುದಿದೆ? ಮಂತ್ರದ ಇತರ ಮೂರು ಭಾಗಗಳು ಮೊದಲನೆಯದರಿಂದ ನೇರವಾಗಿ ಅನುಗತ ವಾಗುತ್ತವೆ. ದೇವರು ತಾನು ಸೃಷ್ಟಿಸಿದ ಎಲ್ಲವನ್ನೂ ವ್ಯಾಪಿಸಿರುತ್ತಾನೆ ಎನ್ನುವುದನ್ನು ನೀವು ನಂಬಿದರೆ, ಅವನು ಕೊಡದಿರುವ ಯಾವುದನ್ನೇ ನೀವು ಸವಿಯಲಾರಿರಿ ಎಂಬುದನ್ನು ನೀವು ನಂಬಬೇಕು. ಅವನು ಅಸಂಖ್ಯಾತ ಮಕ್ಕಳನ್ನು ಸೃಷ್ಟಿಸಿದವನು ಎಂಬುದನ್ನು ಅರಿತರೆ, ಯಾರದೇ ಆಸ್ತಿಗೆ ನೀವು ಆಸೆಪಡಲಾಗದು ಎನ್ನುವುದು ಅನುಗತವಾಗುತ್ತದೆ. ಅವನು ಸೃಷ್ಟಿಸಿದ ಅಸಂಖ್ಯಾತ

ಪ್ರಾಣಿಗಳಲ್ಲಿ ನೀವು ಒಬ್ಬರು ಎಂದು ನೀವು ಭಾವಿಸಿದರೆ, ಎಲ್ಲವನ್ನೂ ತ್ಯಾಗಮಾಡಿ ಅವನ ಅಡಿಗಳಲ್ಲಿ ಅರ್ಪಿಸುವುದು ನಿಮಗೆ ಯೋಗ್ಯವಾಗುತ್ತದೆ. ಅಂದರೆ ಎಲ್ಲದರ ತ್ಯಾಗ ಕೇವಲ ಭೌತಿಕ ತ್ಯಾಗವಾಗಿರದೆ, ಎರಡನೆಯ ಅಥವಾ ಹೊಸಜನ್ಮವನ್ನು ಸೂಚಿಸುತ್ತದೆ. ಅದೊಂದು ಉದ್ದೇಶಪೂರ್ವಕವಾದ ಕ್ರಿಯೆ, ಅಜ್ಞಾನದಿಂದ ಮಾಡಿದ್ದಲ್ಲ. ಆದ್ದರಿಂದ ಅದು ಪುನರ್ಜನ್ಮ. ದೇಹವನ್ನು ಧರಿಸಿದವನು ತಿಂದು, ಕುಡಿದು, ಬಟ್ಟೆಹಾಕಿಕೊಳ್ಳಬೇಕಾಗಿರುವುದರಿಂದ ಸಹಜವಾಗಿಯೇ ತನಗೆ ಬೇಕಾದ ಎಲ್ಲವನ್ನೂ ದೇವರಿಂದಲೇ ಪಡೆಯಲು ಪ್ರಯತ್ನಿಸಬೇಕು. ಆ ತ್ಯಾಗದ ಸಹಜ ಪ್ರತಿಫಲವಾಗಿ ಅವನು ಅದನ್ನು ಪಡೆಯುತ್ತಾನೆ. ಇದಿಷ್ಟು ಸಾಲದು ಎಂಬಂತೆ ಮಂತ್ರವು ಈ ಅದ್ಭುತ ಭಾವನೆಯಿಂದ ಮುಕ್ತಾಯವಾಗುತ್ತದೆ : ಯಾರದೇ ಆಸ್ತಿಗೆ ಆಸೆಪಡಬೇಡ. ಈ ಉಪದೇಶಗಳನ್ನು ನೀವು ಪಾಲಿಸಿದ ಕ್ಷಣವೇ ನೀವು ಎಲ್ಲಾ ಜೀವಿಗಳೊಡನೆ ಶಾಂತಿಯಿಂದ ಬಾಳುವ ಪ್ರಪಂಚದ ಒಬ್ಬ ವಿವೇಕಿ ಪ್ರಜೆಯಾಗುತ್ತೀರಿ. ಈ ಭೂಮಿಯ ಮೇಲೆ ಮತ್ತು ತರುವಾಯ ಅದು ವ್ಯಕ್ತಿಯ ಅತ್ಯುನ್ನತ ಹೆಬ್ಬಯಕೆಗಳನ್ನು ತೃಪ್ತಿಗೊಳಿಸುತ್ತದೆ.

ಇನ್ನೊಂದು ಸಭೆಯಲ್ಲಿ ಗಾಂಧೀಜಿ ಒಬ್ಬನ ಮನಸ್ಸನ್ನು ಕಾಡಬಹುದಾದ ಎಲ್ಲಾ ಸಮಸ್ಯೆಗಳ ಮತ್ತು ಸಂದೇಹಗಳ ಪರಿಹಾರಕ್ಕಾಗಿ ಚಿನ್ನದ ಕೀಲಿಕೈ ಎಂದು ವರ್ಣಿಸಿದ ಮಂತ್ರವೂ ಇದೇ.

ಈಶೋಪನಿಷತ್ತಿನ ಆ ಒಂದು ಮಂತ್ರವನ್ನು ನೆನಪಿನಲ್ಲಿಡಿ. ಇತರ ದರ್ಮಗ್ರಂಥಗಳ ವಿಷಯವನ್ನು ಪೂರ್ತಿ ಮರೆತುಬಿಡಿ. ಧರ್ಮಗ್ರಂಥಗಳ ಸಾಗರದಲ್ಲಿ ನೀವು ಮುಳುಗಿ ಉಸಿರುಕಟ್ಟಿಸಿಕೊಳ್ಳಬಹುದು. ವಿನಯವಂತರಾಗಿ ವಿವೇಕಿಗಳಾಗಿದ್ದಲ್ಲಿ ಅವು ಪಂಡಿತರಿಗೆ ಒಳ್ಳೆಯವೇ. ಆದರೆ ಸಾಮಾನ್ಯ ಮನುಷ್ಯನಿಗೆ ಸಾಗರವನ್ನು ದಾಟಿಸಲು ಈ ಮಂತ್ರವನ್ನು ಬಿಟ್ಟು ಬೇರಾವುದರ ಅಗತ್ಯ ಇಲ್ಲ.

"ಪ್ರಭುವಾದ ದೇವರು ಈ ವಿಶ್ವದಲ್ಲಿರುವ ಎಲ್ಲವನ್ನೂ ವ್ಯಾಪಿಸಿದ್ದಾನೆ. ಆದ್ದರಿಂದ ತ್ಯಾಗಿಗಳಾಗಿ ಮತ್ತು ಎಲ್ಲವನ್ನೂ ಅವನಿಗೆ ಸಮರ್ಪಿಸಿ. ಅನಂತರ ನಿಮ್ಮ ಪಾಲಿಗೆ ಬರಬಹುದಾದುದನ್ನು ಸವಿಯಿರಿ ಅಥವಾ ಬಳಸಿಕೊಳ್ಳಿ. ಯಾರದೇ ಆಸ್ತಿಗೆ ಆಸೆಪಡಬೇಡಿ."

*ಹರಿಜನ*, 30 ಜನವರಿ 1937



# 17

# ಹರಿಪದದ ಭಾಷಣ*

ನೆನ್ನೆ ರಾತ್ರಿ ಕ್ವಿಲಾನಿನ ಸಭೆಯಲ್ಲಿ ಹಿಂದೂಧರ್ಮದ ಸಂದೇಶದ ವಿಷಯವಾಗಿ ನಾನು ಹೇಳಿದ್ದನ್ನು ಕುರಿತಂತೆ ಈ ಸಭೆಯಲ್ಲಿ ನಿಮ್ಮನ್ನು ಕೆಲವು ಕ್ಷಣ ಕಾಯಿಸಲು ನಾನು ಇಷ್ಟಪಡುತ್ತೇನೆ. ಇಡೀ ಹಿಂದೂಧರ್ಮವನ್ನು ಈಶೋಪನಿಷತ್ತಿನ ಮೊದಲನೆಯ ಮಂತ್ರದಲ್ಲಿ ಸಂಗ್ರಹಿಸಬಹುದು ಎಂದು ನಾನು ಸಭೆಯಲ್ಲಿ ಹೇಳುವ ಸಾಹಸ ಮಾಡಿದ್ದೆ :

ಈಶಾವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್।
ತೇನ ತ್ಯಕ್ತೇನ ಭುಂಜೀಥಾ ಮಾ ಗೃಧಃ ಕಸ್ಯಸ್ವಿದ್ಧನಂ ॥

ಸಂಸ್ಕೃತವನ್ನು ಸ್ವಲ್ಪ ಅರಿತವರು ಇದರಲ್ಲಿ ಇತರ ವೇದಮಂತ್ರಗಳಲ್ಲಿ ನೀವು ಕಾಣುವ ಯಾವುದೇ ಕ್ಲಿಷ್ಟತೆಯನ್ನು ಕಾಣುವುದಿಲ್ಲ. ಅದರ ಅರ್ಥ ಸರಳವಾಗಿ ಇದು : ಈ ಜಗತ್ತಿನಲ್ಲಿರುವ ಎಲ್ಲವೂ, ಅತಿಸೂಕ್ಷ್ಮವಾದ ಅಣುವನ್ನೂ ಒಳಗೊಂಡಂತೆ ದೊಡ್ಡದು ಅಥವಾ ಚಿಕ್ಕದು, ಸೃಷ್ಟಿಕರ್ತ ಅಥವಾ ಒಡೆಯ ಎಂದು ತಿಳಿಯಲಾಗಿರುವ ದೇವರಿಂದ ವ್ಯಾಪಿಸಲ್ಪಟ್ಟಿದೆ. ಈಶ ಎಂದರೆ ಆಳುವವನು. ಸೃಷ್ಟಿಕರ್ತನಾದವನು ಸಹಜವಾಗಿ ಹಕ್ಕಿನಿಂದಲೇ ಪ್ರಭುವೂ ಆಗುತ್ತಾನೆ. ಇಲ್ಲಿ ಈ ಮಂತ್ರದಲ್ಲಿ ಋಷಿಯು ದೇವರಿಗೆ ಈಶ್ವರ ಎಂಬ ವಿಶೇಷಣವನ್ನು ಬಿಟ್ಟು ಬೇರೆ ಯಾವುದನ್ನೂ ಆಯ್ಕೆ ಮಾಡಿಲ್ಲ ಮತ್ತು ಅವನ ಅಧಿಕಾರವ್ಯಾಪ್ತಿಯಿಂದ ಯಾವುದಕ್ಕೂ ವಿನಾಯಿತಿ ನೀಡಿಲ್ಲ. ನಾವು ನೋಡುವ

* 1937ರ ಜನವರಿ 17ರಂದು ತಿರುವಾಂಕೂರಿನ ಹರಿಪದದಲ್ಲಿ ಗಾಂಧೀಜಿ ನೀಡಿದ ಭಾಷಣದ ಪೂರ್ಣ ಪಾಠ.

ಪ್ರತಿಯೊಂದೂ ದೇವರಿಂದ ವ್ಯಾಪಿಸಲ್ಪಟ್ಟಿದೆ ಎಂದು ಅವನು ಹೇಳುತ್ತಾನೆ. ಮಂತ್ರದ ಇತರ ಭಾಗಗಳು ಇದರಿಂದ ಸಹಜವಾಗಿ ಅನುಗತವಾಗುತ್ತವೆ. ಆದ್ದರಿಂದ ಅವನು ಹೀಗೆ ಹೇಳುತ್ತಾನೆ : "ಎಲ್ಲವನ್ನೂ ತ್ಯಾಗಮಾಡಿ", ಎಂದರೆ ಈ ಜಗತ್ತಿನಲ್ಲಿರುವ ಎಲ್ಲವನ್ನೂ, ನಮ್ಮ ಈ ಪುಟ್ಟ ಭೂಮಂಡಲವನ್ನಷ್ಟೇ ಅಲ್ಲದೆ ಇಡೀ ವಿಶ್ವವನ್ನು ತ್ಯಾಗ ಮಾಡಿ. ಅದನ್ನು ತ್ಯಜಿಸುವಂತೆ ಅವನು ನಮಗೆ ಹೇಳುವುದಕ್ಕೆ ಕಾರಣ ನಾವು ಎಷ್ಟು ಅಲ್ಪ ಅಣುಗಳೆಂದರೆ ನಮ್ಮಲ್ಲಿ ಸ್ವಾಮ್ಯದ ಯಾವುದೇ ಭಾವನೆ ಇದ್ದರೆ ಅದು ಹಾಸ್ಯಾಸ್ಪದವಾಗಿ ಕಾಣಿಸುತ್ತದೆ. ಅನಂತರ ಋಷಿಯು ತ್ಯಾಗದ ಫಲ ಭುಂಜೀಥಾಃ, ಎಂದರೆ ನಿಮಗೆ ಅಗತ್ಯವಾದ ಎಲ್ಲದರ ಅನುಭೋಗ, ಎನ್ನುತ್ತಾನೆ. "ಅನುಭೋಗ" ಎಂದು ಭಾಷಾಂತರಿಸಿರುವ ಪದದಲ್ಲಿ "ಬಳಸು", "ತಿನ್ನು" ಇತ್ಯಾದಿಯಾಗಿ ಭಾಷಾಂತರಿಸಬಹುದಾದ ಒಂದು ಅರ್ಥವೂ ಇದೆ. ಆದ್ದರಿಂದ ಅದು ನಿಮ್ಮ ಬೆಳವಣಿಗೆಗೆ ಅಗತ್ಯವಾಗಿರುವುದಕ್ಕಿಂತ ಹೆಚ್ಚಿಗೆ ತೆಗೆದುಕೊಳ್ಳುವಂತಿಲ್ಲ ಎಂಬುದನ್ನು ಸೂಚಿಸುತ್ತದೆ. ಆದ್ದರಿಂದ ಈ ಅನುಭೋಗ ಅಥವಾ ಬಳಕೆ ಎರಡು ನಿಯಮಗಳಿಗೆ ಒಳಪಟ್ಟಿದೆ. ಒಂದು ತ್ಯಾಗ ಮಾಡುವುದು ಅಥವಾ, ಭಾಗವತದ ಕರ್ತೃ ಹೇಳುವಂತೆ, *ಕೃಷ್ಣಾರ್ಪಣಮಸ್ತು ಸರ್ವಂ* (ಎಲ್ಲವೂ ದೇವರಿಗೆ ಅರ್ಪಿತ) ಎಂಬ ಮನೋಭಾವದಿಂದ ಅನುಭೋಗಿಸುವುದು. ಭಾಗವತಧರ್ಮದಲ್ಲಿ ನಂಬಿಕೆಯುಳ್ಳ ಪ್ರತಿಯೊಬ್ಬನೂ ಪ್ರತಿದಿನವೂ ಬೆಳಿಗ್ಗೆ ತನ್ನ ಚಿಂತನೆಗಳು, ಮಾತುಗಳು ಮತ್ತು ಕಾರ್ಯಗಳನ್ನು ಕೃಷ್ಣನಿಗೆ ಅರ್ಪಿಸಬೇಕು, ಮತ್ತು ತ್ಯಾಗದ ಅಥವಾ ಅರ್ಪಣೆಯ ದೈನಂದಿನ ಕಾರ್ಯವನ್ನು ಅವನು ನೆರವೇರಿಸುವವರೆಗೆ ಯಾವುದನ್ನೇ ಮುಟ್ಟಲು ಅಥವಾ ಒಂದು ಬಟ್ಟಲು ನೀರು ಕುಡಿಯಲು ಕೂಡ ಅವನಿಗೆ ಹಕ್ಕಿರುವುದಿಲ್ಲ. ಆ ತ್ಯಾಗದ ಮತ್ತು ಅರ್ಪಣೆಯ ಕಾರ್ಯವನ್ನು ಒಬ್ಬ ವ್ಯಕ್ತಿ ನೆರವೇರಿಸಿದಾಗ, ಆ ಕಾರ್ಯದಿಂದ ಅವನಿಗೆ ದಿನನಿತ್ಯದ ಜೀವನದ ಅಗತ್ಯಕ್ಕೆ ತಕ್ಕಂತೆ ಊಟ ಮಾಡುವ, ಕುಡಿಯುವ, ಬಟ್ಟೆ ಧರಿಸುವ ಮತ್ತು ಮನೆಯಲ್ಲಿ ವಾಸಿಸುವ ಹಕ್ಕು ದೊರೆಯುತ್ತದೆ. ಆದ್ದರಿಂದ ಅನುಭೋಗ ಅಥವಾ ಉಪಯೋಗ ತ್ಯಾಗದ ಪ್ರತಿಫಲ ಎಂಬರ್ಥದಲ್ಲಿ ಅಥವಾ ತ್ಯಾಗವು ಅನುಭೋಗದ ಒಂದು ಕರಾರು ಎಂಬರ್ಥದಲ್ಲಿ, ನೀವು ಹೇಗೆ ಬೇಕಾದರೂ ತೆಗೆದುಕೊಳ್ಳಿ, ತ್ಯಾಗವು ನಮ್ಮ ನಿಜವಾದ ಅಸ್ತಿತ್ವಕ್ಕೇ ನಮ್ಮ ಆತ್ಮಕ್ಕೆ ಅತ್ಯಾವಶ್ಯಕ. ಮಂತ್ರದಲ್ಲಿ ತಿಳಿಸಿರುವ ಆ ಕರಾರು ಅಪೂರ್ಣವೋ ಎಂಬಂತೆ, "ಇತರರಿಗೆ ಸೇರಿರುವುದಕ್ಕೆ ಆಸೆ ಪಡಬೇಡ" ಎನ್ನುವುದನ್ನು ಅದಕ್ಕೆ ಸೇರಿಸಿ ಅದನ್ನು ಪೂರ್ಣಗೊಳಿಸಲು ಋಷಿಯು ಧಾವಿಸುತ್ತಾನೆ. ಪ್ರಪಂಚದ ಯಾವುದೇ ಭಾಗದಲ್ಲಿ ಕಾಣಸಿಗುವ ತತ್ವಜ್ಞಾನ ಅಥವಾ ಮತಧರ್ಮ ಸಂಪೂರ್ಣವಾಗಿ ಈ ಮಂತ್ರದಲ್ಲಿದೆ ಮತ್ತು

ಅದಕ್ಕೆ ವಿರುದ್ಧವಾದ ಎಲ್ಲವನ್ನೂ ಅದು ಬಹಿಷ್ಕರಿಸುತ್ತದೆ ಎಂದು ಈಗ ನಾನು ನಿಮಗೆ ಸೂಚಿಸುತ್ತೇನೆ. ವ್ಯಾಖ್ಯಾನಸೂತ್ರಗಳ ಪ್ರಕಾರ, ಶ್ರುತಿಗೆ – ಈಶೋಪನಿಶತ್ತು ಒಂದು ಶ್ರುತಿ – ಸಮಂಜಸವಾಗಿರದ ಯಾವುದೇ ಆಗಲಿ ಅದನ್ನು ಸಂಪೂರ್ಣವಾಗಿ ತಿರಸ್ಕರಿಸಬೇಕು.

## ದೇವಾಲಯಗಳು ಪರಿಶುದ್ಧವಾದವು

ಈಗ ನಾನು ಈ ಮಂತ್ರವನ್ನು ಇಂದಿನ ಪರಿಸ್ಥಿತಿಗಳಿಗೆ ಅನ್ವಯಿಸಲು ಇಚ್ಛಿಸುತ್ತೇನೆ. ಜಗತ್ತಿನಲ್ಲಿರುವ ಸಕಲ–ಸಮಸ್ತವೂ ದೇವರಿಂದ ವ್ಯಾಪಿಸಲ್ಪಟ್ಟಿದೆ. ಹಾಗಿದ್ದ ಮೇಲೆ, ಬ್ರಾಹ್ಮಣ ಮತ್ತು ಭಂಗಿ, ಪಂಡಿತ ಮತ್ತು ಜಾಡಮಾಲಿ, ಎಳವ ಮತ್ತು ಪರಯ, ಅವರು ಯಾವುದೇ ಜಾತಿಗೆ ಸೇರಿರಲಿ, ಇವರೆಲ್ಲರೂ ಈ ಮಂತ್ರದ ಪ್ರಕಾರ ಈಶ್ವರನಿಂದ ವ್ಯಾಪ್ತರಾಗಿದ್ದಾರೆ. ಯಾರೂ ಮೇಲಿನವರಲ್ಲ ಮತ್ತು ಯಾರೂ ಕೆಳಗಿನವರಲ್ಲ, ಎಲ್ಲರೂ ಸಂಪೂರ್ಣವಾಗಿ ಸಮಾನರು, ಸಮಾನರೇಕೆಂದರೆ ಎಲ್ಲರೂ ಆ ಸೃಷ್ಟಿಕರ್ತನಿಂದ ಸೃಷ್ಟಿತರಾದವರು. ಇದು ಬ್ರಾಹ್ಮಣರಿಗೆ ಅಥವಾ ಕ್ಷತ್ರಿಯರಿಗೆ ಬೇಕಾಬಿಟ್ಟಿ ಹಂಚುವ ತಾತ್ವಿಕ ವಿಷಯವಲ್ಲ. ಅದು ಯಾವುದೇ ಬಗೆಯಲ್ಲಿ ಕಡಮೆಗೊಳಿಸಲಾಗದ ಅಥವಾ ಮಂದಗೊಳಿಸಲಾಗದ ಒಂದು ಶಾಶ್ವತ ಸತ್ಯವನ್ನು ಪ್ರತಿಪಾದಿಸುತ್ತದೆ. ಆದ್ದರಿಂದ ಸ್ವತಃ ಮಹಾರಾಜ ಮತ್ತು ಮಹಾರಾಣಿ ತಿರುವಾಂಕೂರಿನ ಅತ್ಯಂತ ಕೆಳದರ್ಜೆಯ ವ್ಯಕ್ತಿಗಿಂತ ಕಿಂಚಿತ್ತೂ ದೊಡ್ಡವರಲ್ಲ. ನಾವೆಲ್ಲರೂ ಒಬ್ಬನೇ ದೇವರ ಸೃಷ್ಟಿ ಮತ್ತು ಸೇವಕರು. ಮಹಾರಾಜನು ಅವನು ಆಗಿರುವಂತೆ ಸಮಾನರ ನಡುವೆ ಮೊದಲನೆಯನವನಾಗಿದ್ದರೆ, ಅವನು ಹಾಗಾಗಿರುವುದು ಅವನ ಆಧಿಪತ್ಯದ ಹಕ್ಕಿನಿಂದಲ್ಲ, ಅವನ ಸೇವೆಯ ಹಕ್ಕಿನಿಂದ. ಆದ್ದರಿಂದ ಪ್ರತಿಯೊಬ್ಬ ಮಹಾರಾಜನನ್ನೂ ಪದ್ಮನಾಭದಾಸ ಎಂದು ಕರೆದಿರುವುದು ಎಷ್ಟು ಚೆನ್ನಾಗಿದೆ, ಎಷ್ಟು ಉದಾತ್ತವಾಗಿದೆ! ಆದ್ದರಿಂದ ಮಹಾರಾಜರು ಅಥವಾ ಮಹಾರಾಣಿ ನಮ್ಮಲ್ಲಿನ ಯಾರಿಗಿಂತಲೂ ಸ್ವಲ್ಪವೂ ದೊಡ್ಡವರಲ್ಲ ಎಂದು ನಾನು ನಿಮಗೆ ಹೇಳಿದಾಗ, ಸ್ವತಃ ಆ ರಾಜರಾಣಿಯರೇ ಒಪ್ಪಿಕೊಂಡಿದ್ದ ವಾಸ್ತವಿಕ ಸತ್ಯವನ್ನು ನಿಮಗೆ ಹೇಳಿದ್ದೆ. ಹಾಗಿದ್ದಲ್ಲಿ, ಬೇರೆ ಯಾವುದೇ ಮಾನವ ವ್ಯಕ್ತಿಗಿಂತ ತಾನು ಶ್ರೇಷ್ಠನೆಂದು ಇಲ್ಲಿರುವ ಯಾವನು ತಾನೆ ಭಾವಿಸಿಕೊಳ್ಳುವ ಧೈರ್ಯಮಾಡುತ್ತಾನೆ? ಆದ್ದರಿಂದ ಈ ಮಂತ್ರ ಅನ್ವಯಿಸುವುದಾದಲ್ಲಿ, ಅವರ್ಣರಿಂದ ದೇವಸ್ಥಾನಗಳು ಅಪವಿತ್ರವಾಗುವುವೆಂದು ನಂಬುವ ಪುರುಷ ಅಥವಾ ಸ್ತ್ರೀ ಇಲ್ಲಿ ಇದ್ದರೆ ಆ ವ್ಯಕ್ತಿ ಒಂದು ಮಹಾಪಾತಕವನ್ನು ಮಾಡಿದ್ದಾನೆ ಎಂದು ನಾನು ಘೋಷಿಸುವುದಾಗಿ

ನಿಮಗೆ ಹೇಳುತ್ತೇನೆ. ಈ ಘೋಷಣೆಯು* ನಮ್ಮ ದೇವಸ್ಥಾನಗಳಿಗೆ ಅಂಟಿದ್ದ ಕಳಂಕವನ್ನು ತೊಡೆದುಹಾಕಿದೆ ಎಂದು ನಾನು ನಿಮಗೆ ಹೇಳುತ್ತೇನೆ.

ನಾನು ಪಠಿಸಿದ ಮಂತ್ರವು ನಮ್ಮ ಗಂಡಸರು, ಹೆಂಗಸರು ಮತ್ತು ಮಕ್ಕಳು ಎಲ್ಲರ ಹೃದಯಗಳಲ್ಲಿ ನೆಲೆಗೊಳ್ಳಲಿ ಎಂದು ಇಚ್ಛಿಸುತ್ತೇನೆ. ನಾನು ಭಾವಿಸಿರುವಂತೆ, ಇದು ಹಿಂದೂಧರ್ಮದ ಸಾರವನ್ನು ಒಳಗೊಂಡಿದ್ದರೆ, ಪ್ರತಿಯೊಂದು ದೇವಸ್ಥಾನದ ಮಹಾದ್ವಾರದ ಮೇಲೂ ಅದನ್ನು ಕೆತ್ತಬೇಕು. ಆ ದೇವಸ್ಥಾನಗಳಿಂದ ನೀವು ಯಾರನ್ನಾದರೂ ಬಹಿಷ್ಕರಿಸಿದರೆ, ಪ್ರತಿ ಹೆಜ್ಜೆಯಲ್ಲಿಯೂ ನಾವು ಮಂತ್ರವನ್ನು ಸುಳ್ಳುಮಾಡುತ್ತಿದ್ದೇವೆಂದು ನೀವು ಭಾವಿಸುವುದಿಲ್ಲವೇ? ಆದ್ದರಿಂದ ಈ ಉದಾರ ಘೋಷಣೆಗೆ ನೀವು ಅರ್ಹರು ಎಂದು ಸಾಧಿಸುವುದಾದರೆ ಮತ್ತು ನಿಮಗೆ ಮತ್ತು ನಿಮ್ಮ ಭವಿಷ್ಯದ ಮೇಲೆ ಅಧಿಕಾರ ಹೊಂದಿರುವವರಿಗೆ ನೀವು ನಿಷ್ಠರಾಗಿರುವುದಾದರೆ, ನೀವು ಈ ಘೋಷಣೆಯನ್ನು ಅಕ್ಷರಶಃ ಮತ್ತು ಅದರ ಭಾವಸಹಿತವಾಗಿ ಪಾಲಿಸುತ್ತೀರಿ. ಅವು ದೇವರ ನಿವಾಸಗಳಲ್ಲ ಎಂದು ನಾನು ಒಮ್ಮೆ ನುಡಿದಿದ್ದ ತಿರುವಾಂಕೂರಿನ ದೇವಸ್ಥಾನಗಳು ಈ ಘೋಷಣೆಯ ದಿನದಿಂದ ದೇವರ ನಿವಾಸಗಳಾಗಿವೆ, ಏಕೆಂದರೆ ಅಸ್ಪೃಶ್ಯನೆಂದು ಪರಿಗಣಿಸುತ್ತಿದ್ದ ಯಾವ ವ್ಯಕ್ತಿಯನ್ನೂ ಅಲ್ಲಿಂದ ಮುಂದೆ ಅವುಗಳಿಂದ ಹೊರಗಿಟ್ಟಿಲ್ಲ. ಆದ್ದರಿಂದ ಸಮಾಜದಲ್ಲಿ ಪರಯರೆಂದು ಪರಿಗಣಿತರಾಗಿದ್ದವರಿಗೆ ದೇವಾಲಯಗಳನ್ನು ತೆರೆಯಲಾಗಿದೆ ಎಂಬ ಕಾರಣಕ್ಕಾಗಿ ದೇವಸ್ಥಾನಗಳಿಗೆ ಹೋಗುವುದನ್ನು ನಿಲ್ಲಿಸುವ ಯಾವ ಗಂಡಸಾಗಲಿ ಹೆಂಗಸಾಗಲಿ ಇಡೀ ತಿರುವಾಂಕೂರಿನಲ್ಲಿ ಇಲ್ಲದಂತಾಗಲಿ ಎಂದು ನಾನು ಆಶಿಸುತ್ತೇನೆ ಮತ್ತು ಪ್ರಾರ್ಥಿಸುತ್ತೇನೆ.

*ಹರಿಜನ*, 30 ಜನವರಿ 1937

---

* ದೇವಸ್ಥಾನ ಪ್ರವೇಶದ ಘೋಷಣೆ



# 18

# ಕೊಟ್ಟಾಯಂ ಭಾಷಣದಿಂದ

ಮಂತ್ರವು ದೇವರನ್ನು ಸೃಷ್ಟಿಕರ್ತ, ರಾಜ ಮತ್ತು ಪ್ರಭು ಎಂದು ವರ್ಣಿಸುತ್ತದೆ. ಈ ಮಂತ್ರವು ಯಾವ ಮುನಿಗೆ ಹೊರಗೆಡಹಲಾಯಿತೋ, ಆ ಮುನಿ ದೇವರು ಸರ್ವಾಂತರ್ಯಾಮಿ ಎಂಬ ಅದ್ಭುತವಾದ ಹೇಳಿಕೆಯಿಂದ ತೃಪ್ತನಾಗಲಿಲ್ಲ. ಆದರೆ ಮುಂದುವರೆದು ಅವನು ಹೀಗೆ ಹೇಳಿದ : "ದೇವರು ಎಲ್ಲವನ್ನೂ ವ್ಯಾಪಿಸಿರುವುದರಿಂದ ನಿನಗೆ ಯಾವುದೂ, ಅಷ್ಟೇಕೆ ನಿನ್ನ ಸ್ವಂತ ದೇಹಕೂಡ, ನಿನಗೆ ಸೇರಿಲ್ಲ. ದೇವರು ನೀನು ಹೊಂದಿರುವ ಎಲ್ಲದರ ವಿವಾದಾಸ್ಪದನಲ್ಲದ, ಆಕ್ಷೇಪ ಮುಕ್ತನಾದ ಒಡೆಯ." ಆದ್ದರಿಂದ ತನ್ನನ್ನು ಹಿಂದೂ ಎಂದು ಕರೆದುಕೊಳ್ಳುವ ವ್ಯಕ್ತಿಯು ಹೊಸಬಾಳಿನ ಅಥವಾ, ಕ್ರೈಸ್ತರು ಕರೆಯುವಂತೆ, ಎರಡನೆ ಹುಟ್ಟಿನ ಪ್ರಕ್ರಿಯೆಗೆ ಒಳಗಾದಾಗ, ತನ್ನ ಸ್ವಂತ ಆಸ್ತಿಯೆಂದು ಅಜ್ಞಾನದಲ್ಲಿ ಕರೆದ ಎಲ್ಲವನ್ನೂ ಸಮರ್ಪಣೆ ಅಥವಾ ತ್ಯಾಗಮಾಡಬೇಕು. ಆಗ ಈ ಸಮರ್ಪಣೆ ಅಥವಾ ತ್ಯಾಗವನ್ನು ಮಾಡಿದಾಗ ಅದಕ್ಕೆ ಪ್ರತಿಫಲವನ್ನು ದೇವರು ಅವನಿಗೆ ಅನ್ನ, ಬಟ್ಟೆ ಅಥವಾ ವಸತಿಗೆ ಬೇಕಾಗುವುದರ ಸರಿಯಾದ ಜವಾಬ್ದಾರಿ ವಹಿಸುವ ರೂಪದಲ್ಲಿ ಅವನು ಪಡೆಯುತ್ತಾನೆಂದು ಅವನಿಗೆ ತಿಳಿಸಲಾಗಿದೆ. ಆದ್ದರಿಂದ ಜೀವನದ ಆವಶ್ಯಕತೆಗಳ ಅನುಭೋಗಕ್ಕೆ ಅಥವಾ ಬಳಕೆಗೆ ಷರತ್ತೆಂದರೆ ಅವುಗಳ ಸಮರ್ಪಣೆ ಅಥವಾ ತ್ಯಾಗ. ಆ ಸಮರ್ಪಣೆ ಅಥವಾ ತ್ಯಾಗವನ್ನು ಪ್ರತಿದಿನವೂ ಮಾಡಬೇಕು, ಇಲ್ಲದಿದ್ದಲ್ಲಿ ಸದಾ ಚಟುವಟಿಕೆಯಿಂದ ತುಂಬಿದ ಈ ಪ್ರಪಂಚದಲ್ಲಿ ನಾವು ಜೀವನ ಕೇಂದ್ರಸಂಗತಿಯನ್ನೇ ಮರೆತುಬಿಡಬಹುದು. ಇವೆಲ್ಲಕ್ಕೂ ಶಿಖರವೆನಿಸುವಂತೆ,

ಋಷಿಯು "ಯಾರದೇ ಸಿರಿಗೆ ಆಸೆಪಡಬೇಡಿ" ಎನ್ನುತ್ತಾನೆ. ಈ ಅತಿಹ್ರಸ್ವ ಮಂತ್ರದಲ್ಲಿ ಹುದುಗಿರುವ ಸತ್ಯ ಪ್ರತಿಯೊಬ್ಬ ಮಾನವನ ಅತ್ಯುನ್ನತ ಹಂಬಲಗಳನ್ನು – ಅವು ಇಹಲೋಕಕ್ಕೆ ಅಥವಾ ಪರಲೋಕ್ಕೆ ಯಾವುದಕ್ಕೇ ಸಂಬಂಧಿಸಿರಲಿ – ಪೂರೈಸಲು ಯೋಜಿಸಿದ್ದಾಗಿದೆ ಎಂದು ನಾನು ನಿಮಗೆ ಸೂಚಿಸುತ್ತೇನೆ. ಪ್ರಪಂಚದ ಧರ್ಮಗ್ರಂಥಗಳನ್ನು ಕುರಿತ ನನ್ನ ಪರಿಶೋಧನೆಯಲ್ಲಿ ಈ ಮಂತ್ರಕ್ಕೆ ಸೇರಿಸಬೇಕಾದ ಯಾವುದನ್ನೇ ಆಗಲಿ ನಾನು ಕಂಡಿಲ್ಲ. ದರ್ಮಗ್ರಂಥಗಳ ವಿಷಯದಲ್ಲಿ ನಾನು ಓದಿರುವುದು ಅಲ್ಪ-ಸ್ವಲ್ಪ ಮಾತ್ರ. – ಅದು ತೀರ ಸ್ವಲ್ಪ ಎನ್ನುವುದನ್ನು ನಾನು ಒಪ್ಪಿಕೊಳ್ಳುತ್ತೇನೆ – ಗಮನಕ್ಕೆ ತಂದುಕೊಂಡಾಗ ಎಲ್ಲಾ ಧರ್ಮಗ್ರಂಥಗಳಲ್ಲಿರುವ ಒಳ್ಳೆಯದೆಲ್ಲವೂ ಈ ಮಂತ್ರದಿಂದ ಉತ್ಪನ್ನವಾಗಿದೆ ಎಂದು ನನಗೆ ಅನಿಸುತ್ತದೆ. ಅದು ವಿಶ್ವಭ್ರಾತೃತ್ವವಾದರೆ – ಕೇವಲ ಎಲ್ಲಾ ಮಾನವವ್ಯಕ್ತಿಗಳ ಭ್ರಾತೃತ್ವ ಆಗಿರದೆ, ಎಲ್ಲಾ ಜೀವಂತ ಪ್ರಾಣಿಗಳದು ಆದರೆ – ನನಗೆ ಅದು ಈ ಮಂತ್ರದಲ್ಲಿ ಸಿಗುತ್ತದೆ. ಅದು ಈಶ್ವರ ಮತ್ತು ಪ್ರಭು ಹಾಗೂ ನೀವು ಚಿಂತಿಸಬಹುದಾದ ಎಲ್ಲಾ ವಿಶೇಷಣಗಳಲ್ಲಿನ ಅಚಲ ಶ್ರದ್ಧೆಯಾದಲ್ಲಿ ನನಗೆ ಅದು ಈ ಮಂತ್ರದಲ್ಲಿ ಸಿಗುತ್ತದೆ. ಅದು ಭಗವಂತನಲ್ಲಿ ಸಂಪೂರ್ಣ ಶರಣಾಗತಿಯ ಮತ್ತು ನನಗೆ ಅಗತ್ಯವಾದ ಎಲ್ಲವನ್ನೂ ಅವನು ಒದಗಿಸುತ್ತಾನೆ ಎಂಬ ನಂಬಿಕೆಯ ಭಾವನೆಯಾಗಿದ್ದಲ್ಲಿ ಆಗಲೂ ಕೂಡ ನನಗೆ ಅದು ಈ ಮಂತ್ರದಲ್ಲಿ ಸಿಗುತ್ತದೆ ಎಂದು ನಾನು ಹೇಳುತ್ತೇನೆ. ನನ್ನ ಮತ್ತು ನಿಮ್ಮೆಲ್ಲರ ಬದುಕಿನ ಪ್ರತಿ ಎಳೆಯನ್ನೂ ದೇವರು ವ್ಯಾಪಿಸಿರುವುದರಿಂದ, ಭೂಮಿಯ ಮೇಲಿನ ಎಲ್ಲಾ ಪ್ರಾಣಿಗಳ ಸಮಾನತೆಯ ಸಿದ್ಧಾಂತವನ್ನು ನಾನು ಆದರಿಂದ ಪಡೆಯುತ್ತೇನೆ. ಅದು ಎಲ್ಲಾ ತಾತ್ವಿಕ ಕಮ್ಯೂನಿಸ್ಟರನ್ನೂ ತೃಪ್ತಿಗೊಳಿಸಬೇಕು. ದೇವರಿಗೆ ಸೇರಿದ ಯಾವುದನ್ನೇ ನಾನು ನನ್ನದಾಗಿ ಹೊಂದಿರಲಾಗದು ಎಂದು ಈ ಮಂತ್ರ ನನಗೆ ತಿಳಿಸುತ್ತದೆ. ನನ್ನನ್ನು ಮತ್ತು ಈ ಮಂತ್ರವನ್ನು ನಂಬುವ ಎಲ್ಲರ ಬದುಕೂ ಸಂಪೂರ್ಣ ಸಮರ್ಪಣೆಯ ಬದುಕಾಗಬೇಕಾಗಿದ್ದಲ್ಲಿ, ಅದು ನಮ್ಮ ಸಹಜೀವಿಗಳ ಸತತ ಸೇವೆಗಾಗಿ ಮುಡಿಪಾದ ಬದುಕಾಗಬೇಕು ಎನ್ನುವುದು ಅನುಗತವಾಗುತ್ತದೆ.

ಇದು ನನ್ನ ನಂಬಿಕೆ ಮತ್ತು ಹಿಂದೂಗಳೆಂದು ಕರೆದುಕೊಳ್ಳುವ ಎಲ್ಲರ ನಂಬಿಕೆ ಆಗಬೇಕು ಎಂದು ನಾನು ಹೇಳುತ್ತೇನೆ. ಕ್ರೈಸ್ತರು ಮತ್ತು ಮುಸಲ್ಮಾನರು ತಮ್ಮ ಗ್ರಂಥಗಳನ್ನು ಪರೀಕ್ಷಿಸಿ ನೋಡಿದಲ್ಲಿ ಅವುಗಳಲ್ಲಿ ಇದಕ್ಕಿಂತ ಹೆಚ್ಚಿನದೇನನ್ನೂ ಕಾಣುವುದಿಲ್ಲ ಎಂದು ನನ್ನ ಕ್ರೈಸ್ತ ಮತ್ತು ಮುಸಲ್ಮಾನ ಸ್ನೇಹಿತರಿಗೆ ಸೂಚಿಸುವ ಸಾಹಸವನ್ನೂ ಮಾಡುತ್ತೇನೆ.

ಹಿಂದೂಧರ್ಮದ ಹೆಸರಿನಲ್ಲಿ ಅನೇಕ ಮೂಢನಂಬಿಕೆಗಳು ಪ್ರಚಾರದಲ್ಲಿವೆ ಎಂಬ ಸಂಗತಿ ನನಗೆ ಗೊತ್ತಿಲ್ಲದೆ ಇಲ್ಲ ಎಂಬುದನ್ನು ನಾನು ನಿಮ್ಮಿಂದ ಮುಚ್ಚಿಡಲು ಬಯಸುವುದಿಲ್ಲ. ಹಿಂದೂಧರ್ಮದ ವೇಷತೊಟ್ಟು ಪ್ರಚಲಿತವಾಗಿ ಇರುವ ಮೂಢನಂಬಿಕೆಗಳೆಲ್ಲವನ್ನೂ ನಾನು ಬಹಳ ದುಃಖಪೂರ್ವಕವಾಗಿ ಅರಿತಿದ್ದೇನೆ ಮತ್ತು ವಿಷಯಗಳ ಬಗ್ಗೆ ನೇರವಾಗಿ ಮಾತನಾಡಲು ಹಿಂಜರಿಯುವುದಿಲ್ಲ. ಅಸ್ಪೃಶ್ಯತೆಯನ್ನು ಈ ಮೂಢನಂಬಿಕೆಗಳಲ್ಲಿ ಅತ್ಯಂತ ದೊಡ್ಡದು ಎಂದು ವರ್ಣಿಸಲು ನಾನು ಹಿಂದೆಗೆದಿಲ್ಲ. ಆದರೆ, ಇವೆಲ್ಲ ಇದ್ದರೂ, ನಾನು ಹಿಂದೂವಾಗಿಯೇ ಉಳಿದ್ದಿದ್ದೇನೆ. ಏಕೆಂದರೆ ಈ ಮೂಢನಂಬಿಕೆಗಳು ಹಿಂದೂಧರ್ಮದ ಅಂಗಭಾಗವಾಗಿವೆ ಎಂಬುದನ್ನು ನಾನು ನಂಬುವುದಿಲ್ಲ. ನಾನು ನಿಮಗೆ ವಿವರಿಸಿರುವ ಮತ್ತು ನಾನು ಹೆಸರಿಸಿರುವ ಮಂತ್ರದಲ್ಲಿ ಅಡಗಿರುವ ಸತ್ಯಕ್ಕೆ ಹೊಂದಿಕೆಯಾಗದ ಯಾವುದನ್ನೇ ಆಗಲಿ ಅದು ಹಿಂದೂಧರ್ಮಕ್ಕೆ ಸೇರಿದ್ದಲ್ಲ ಎಂದು ಕೂಡಲೇ ನಿರಾಕರಿಸಬೇಕು ಎಂದು ಹಿಂದೂಧರ್ಮವು ವಿಧಿಸಿರುವ ವ್ಯಾಖ್ಯಾನ ಸೂತ್ರಗಳೇ ನನಗೆ ಬೋಧಿಸುತ್ತವೆ.

*ಹರಿಜನ*, 30 ಜನವರಿ 1937



# 19

# ಯಜ್ಞ

ಯಜ್ಞ ಎಂದರೆ ಇತರರ ಕ್ಷೇಮಕ್ಕಾಗಿ, ಲೌಕಿಕ ಅಥವಾ ಆಧ್ಯಾತ್ಮಿಕ ರೂಪದ ಯಾವುದೇ ಪ್ರತಿಫಲ ಬಯಸದೆ ಮಾಡುವ ಒಂದು ಕ್ರಿಯೆ. ಇಲ್ಲಿ "ಕ್ರಿಯೆ" ಎಂಬುದನ್ನು ಅದರ ಅತ್ಯಂತ ವಿಶಾಲಾರ್ಥದಲ್ಲಿ ತೆಗೆದುಕೊಳ್ಳಬೇಕು. ಅದು ಭಾವನೆ, ಮಾತು ಹಾಗೂ ಕಾರ್ಯವನ್ನು ಒಳಗೊಳ್ಳುತ್ತದೆ. "ಇತರರ" ಎನ್ನುವುದು ಮಾನವಕುಲವನ್ನು ಮಾತ್ರವಲ್ಲದೆ ಇಡೀ ಜೀವವರ್ಗವನ್ನು ಒಳಗೊಳ್ಳುತ್ತದೆ. ಆದ್ದರಿಂದ ಹಾಗೂ ಅಹಿಂಸೆಯ ದೃಷ್ಟಿಕೋನದಿಂದ ಕೂಡ, ಕೆಳವರ್ಗದ ಪ್ರಾಣಗಳನ್ನು ಬಲಿಕೊಡುವುದು, ಮಾನವಸೇವೆಯ ದೃಷ್ಟಿಯಿಂದಲೇ ಆಗಿರಲಿ, ಯಜ್ಞವಲ್ಲ. ಪ್ರಾಣಿ ಬಲಿ ವೇದಗಳಲ್ಲಿ ಸ್ಥಾನ ಪಡೆದಿದೆ ಎಂದು ಹೇಳಲಾಗಿರುವುದು ಗಣ್ಯವಾದ ವಿಷಯವೇನಲ್ಲ. ಅಂಥ ಯಜ್ಞವು ಸತ್ಯ ಮತ್ತು ಅಹಿಂಸೆಗಳ ಮೂಲಭೂತ ಪರೀಕ್ಷೆಯನ್ನು ಎದುರಿಸಲಾರದು ಎನ್ನುವುದು ನಮಗೆ ಸಾಕು. ವೈದಿಕ ಪಾಂಡಿತ್ಯದಲ್ಲಿ ನನಗೆ ಅರ್ಹತೆಯಿಲ್ಲ ಎನ್ನವುದನ್ನು ನಾನು ಕೂಡಲೇ ಒಪ್ಪಿಕೊಳ್ಳುತ್ತೇನೆ. ಆದರೆ ಈ ವಿಷಯ ಕುರಿತಂತೆ ನನ್ನ ಅನರ್ಹತೆ ನನ್ನನ್ನು ಬಾಧಿಸುವುದಿಲ್ಲ, ಏಕೆಂದರೆ ಪ್ರಾಣಿ ಬಲಿಯ ಆಚರಣೆ ವೈದಿಕಸಮಾಜದ ಒಂದು ಅಂಶವಾಗಿತ್ತು ಎನ್ನುವುದನ್ನು ಸಾಬೀತು ಪಡಿಸಿದರೂ ಅಹಿಂಸಾವಾದಿಗೆ ಅದೊಂದು ಪೂರ್ವನಿದರ್ಶನವಾಗಲಾರದು.

ಮತ್ತೆ ಪ್ರಧಾನ ಯಜ್ಞವು ಅತ್ಯಂತ ವಿಶಾಲ ಪ್ರದೇಶದಲ್ಲಿರುವ ಅತ್ಯಧಿಕ ಸಂಖ್ಯೆಯ ಜನರ ಕಲ್ಯಾಣಕ್ಕೆ ನೆರವು ನೀಡುವ ಒಂದು ಕ್ರಿಯೆಯಾಗಬೇಕು ಮತ್ತು ಅದನ್ನು ಅತ್ಯಂತ ಹೆಚ್ಚಿನ ಸಂಖ್ಯೆಯ ಸ್ತ್ರೀಪುರುಷರು ಅತ್ಯಲ್ಪ ಕಷ್ಟದಿಂದ

ಮಾಡುವಂತಿರಬೇಕು. ಆದ್ದರಿಂದ ಉನ್ನತ ಪ್ರಯೋಜನವೆಂದು ಹೇಳಲಾಗಿರುವ ಒಂದನ್ನು ಸಾದಿಸಲೇ ಆಗಲಿ, ಬೇರೊಬ್ಬರಿಗೆ ಹಾನಿಯನ್ನು ಬಯಸುವುದು ಅಥವಾ ಮಾಡುವುದು ಒಂದು ಯಜ್ಞವಾಗಲಾರದು, ಮಹಾಯಜ್ಞವಾಗುವುದಂತೂ ಇನ್ನೂ ಕಡಮೆ. ಯಜ್ಞದ ವರ್ಗದಡಿ ಬರದ ಕ್ರಿಯೆಯೆಲ್ಲವೂ ಬಂಧಕವಾಗುತ್ತದೆ ಎಂದು ಗೀತೆ ಬೋಧಿಸುತ್ತದೆ ಮತ್ತು ಅನುಭವ ಸಮರ್ಥಿಸುತ್ತದೆ.

ಈ ಅರ್ಥದಲ್ಲಿ ಯಜ್ಞವಿಲ್ಲದೆ ಈ ಪ್ರಪಂಚ ಒಂದು ಕ್ಷಣವೂ ಇರಲಾರದು. ಆದ್ದರಿಂದ ಗೀತೆಯು ಎರಡನೆಯ ಅಧ್ಯಾಯದಲ್ಲಿ ನಿಜವಾದ ಜ್ಞಾನವನ್ನು ನಿರೂಪಿಸಿ ಮೂರನೆಯದರಲ್ಲಿ ಅದನ್ನು ಪಡೆಯವು ಸಾಧನದ ವಿಷಯವನ್ನು ಎತ್ತಿಕೊಳ್ಳುತ್ತದೆ, ಮತ್ತು ಸೃಷ್ಟಿಯ ಜೊತೆಯಲ್ಲೇ ಯಜ್ಞವು ಬಂದಿತೆಂದು ವಿಸ್ಪಷ್ಟ ಶಬ್ದಗಳಲ್ಲಿ ಘೋಷಿಸುತ್ತದೆ. ಆದ್ದರಿಂದ ಈ ದೇಹವನ್ನು ನಮಗೆ ಕೊಟ್ಟಿರುವುದು ಅದರ ಮೂಲಕ ಇಡೀ ಸೃಷ್ಟಿಗೆ ನಾವು ಸೇವೆ ಮಾಡಲು ಮಾತ್ರವೇ. ಆದ್ದರಿಂದ ಯಜ್ಞ ಮಾಡದೆ ಊಟಮಾಡುವವನು ಕದ್ದ ಆಹಾರವನ್ನು ಉಣ್ಣುತ್ತಾನೆ ಎನ್ನುತ್ತದೆ ಗೀತೆ. ಪರಿಶುದ್ಧವಾದ ಜೀವನವನ್ನು ನಡೆಸಬೇಕೆಂದಿರುವವನ ಪ್ರತಿಯೊಂದು ಕ್ರಿಯೆಯೂ ಯಜ್ಞರೂಪವಾಗಿರಬೇಕು. ಯಜ್ಞವು ನಮ್ಮ ಹುಟ್ಟಿನ ಜೊತೆಗೆ ಬಂದಿರುವುದರಿಂದ, ನಾವು ಜಿವಮಾನವೆಲ್ಲಾ ಸಾಲಗಾರರು ಮತ್ತು ಈ ರೀತಿ ಜಗತ್ತಿಗೆ ಸೇವೆ ಸಲ್ಲಿಸಲು ಸದಾ ಕರ್ತವ್ಯಬದ್ಧರಾಗಿರುತ್ತೇವೆ. ಜೀತದಾಳು ತಾನು ಜೀತಮಾಡುವ ಧಣಿಯಿಂದ ಅನ್ನ, ಬಟ್ಟೆ ಮುಂತಾದುವನ್ನು ಪಡೆಯುವಂತೆಯೇ ನಾವು ಜಗತ್ತಿನ ಒಡೆಯನು ನಮಗೆ ನೀಡಬಹುದಾದ ದಾನಗಳನ್ನು ಕೃತಜ್ಞತೆಯಿಂದ ಸ್ವೀಕರಿಸಬೇಕು. ನಾವು ಪಡೆಯುವುದನ್ನು ದಾನವೆಂದು ಕರೆಯಬೇಕು, ಏಕೆಂದರೆ ಸಾಲಗಾರರಾಗಿ ನಾವು ನೆರವೇರಿಸಿದ ಕರ್ತವ್ಯಗಳಿಗಾಗಿ ಯಾವುದೇ ಪ್ರತಿಫಲಕ್ಕೆ ನಮಗೆ ಹಕ್ಕಿಲ್ಲ. ಆದ್ದರಿಂದ ನಾವು ಅದನ್ನು ಪಡೆಯದೆ ಹೋದರೆ ಅದಕ್ಕಾಗಿ ನಾವು ಒಡೆಯನಾದ ದೇವರನ್ನು ದೂಷಿಸಬಾರದು. ಅವನ ಇಚ್ಛೆಗೆ ಅನುಸಾರವಾಗಿ ಪೋಷಿಸಲು ಅಥವಾ ಬಿಸಾಡಲು ನಮ್ಮ ಶರೀರ ಅವನಿಗೆ ಸೇರಿದ್ದು. ಇದು ಆಕ್ಷೇಪಣೆಗೆ ಅಥವಾ ಕರುಣೆಗೆ ಕೂಡ ಸಂಬಂದಪಟ್ಟ ವಿಷಯವಲ್ಲ. ತದ್ವಿರುದ್ಧವಾಗಿ, ದೇವರ ವ್ಯವಸ್ಥೆಯಲ್ಲಿ ನಮ್ಮ ಯೋಗ್ಯಸ್ಥಾನವನ್ನು ನಾವು ಅರಿತದ್ದೇ ಆದಲ್ಲಿ ಅದು ಸಹಜವಾದ ಮತ್ತು ಹಿತವಾದ ಹಾಗೂ ಅಪೇಕ್ಷಣೀಯವಾದ ಸ್ಥಿತಿ ಕೂಡ. ಈ ಮಹದಾನಂದವನವನು ಅನುಭವಿಸಬೇಕಾದರೆ, ನಮಗೆ ನಿಜವಾಗಿ ದೃಢಶ್ರದ್ಧೆ ಬೇಕು. "ನಿಮ್ಮ ವಿಷಯಕ್ಕೆ ಸ್ವಲ್ಪವೂ ಚಿಂತಿಸಬೇಡಿ, ಎಲ್ಲಾ ಚಿಂತೆಯನ್ನೂ

ದೇವರಿಗೆ ಬಿಡಿ" – ಇದು ಎಲ್ಲಾ ದರ್ಮಗಳಲ್ಲಿರುವ ಆದೇಶವಾಗಿ ಕಾಣಿಸುತ್ತದೆ.

ಇದು ಯಾರಿಗೂ ಭಯಹುಟ್ಟಿಸಬೇಕಾಗಿಲ್ಲ. ಶುದ್ಧವಾದ ಅಂತಃಪ್ರಜ್ಞೆಯಿಂದ ಸೇವೆಗೆ ತನ್ನನ್ನು ಅರ್ಪಿಸಿಕೊಳ್ಳುವ ವ್ಯಕ್ತಿ ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಅದರ ಅಗತ್ಯವನ್ನು ದಿನದಿಂದ ದಿನಕ್ಕೆ ಅರಿತುಕೊಳ್ಳುತ್ತಾನೆ ಮತ್ತು ಸತತವಾಗಿ ಶ್ರದ್ಧೆಯನ್ನು ವೃದ್ಧಿಗೊಳಿಸುತ್ತಾನೆ. ಸ್ವಾರ್ಥವನ್ನು ತ್ಯಜಿಸಲು ಮತ್ತು ತನ್ನ ಹುಟ್ಟಿನ ಪರಿಸ್ಥಿತಿಗಳನ್ನು ಅರಿತುಕೊಳ್ಳಲು ತಯಾರಿಲ್ಲದ ಯಾವನೂ ಸೇವೆಯ ಹಾದಿಯನ್ನು ತುಳಿಯಲಾರ. ನಮ್ಮಲ್ಲಿ ಪ್ರತಿಯೊಬ್ಬನೂ, ಪ್ರಜ್ಞಾಪೂರ್ವಕವಾಗಿ ಅಥವಾ ಅಪ್ರಜ್ಞಾಪೂರ್ವಕವಾಗಿ ಯಾವುದೋ ಒಂದಲ್ಲ ಒಂದು ಸೇವೆ ಸಲ್ಲಿಸುತ್ತಾನೆ. ಉದ್ದೇಶಪುರ್ವಕವಾಗಿ ಸೇವೆ ಮಾಡುವ ಅಭ್ಯಾಸವನ್ನು ನಾವು ಬೆಳೆಸಿದಲ್ಲಿ, ಸೇವೆ ಮಾಡುವ ನಮ್ಮ ಬಯಕೆ ಕ್ರಮವಾಗಿ ಬಲಿಷ್ಠವಾಗಿ ಬೆಳೆಯುತ್ತದೆ, ಮತ್ತು ನಮ್ಮ ಸುಖಕ್ಕೆ ಮಾತ್ರವೇ ಅಲ್ಲದೆ ಹೊರ ಜಗತ್ತಿನದಕ್ಕೂ ನೆರವಾಗುತ್ತದೆ.

* * *

ಮತ್ತೆ, ನಮ್ಮಲ್ಲಿ ಒಳ್ಳೆಯವರು ಮಾತ್ರವೇ ಅಲ್ಲದೆ ಎಲ್ಲರೂ ನಮ್ಮ ಸಾಧನಸಂಪತ್ತುಗಳನ್ನು ಮಾನವಕುಲದ ಪ್ರಯೋಜನಕ್ಕಾಗಿ ವಿನಿಯೋಗಿಸಲು ಬದ್ಧರಾಗಿದ್ದೇವೆ. ಕಟ್ಟಳೆ ಹೀಗಿದ್ದಲ್ಲಿ – ಸ್ಪಷ್ಟವಾಗಿಯೇ ಅದು ಹಾಗಿದೆ – ಭೋಗವು ಬದುಕಿನಲ್ಲಿ ತನ್ನ ಸ್ಥಾನವನ್ನು ಕಳೆದುಕೊಳ್ಳುತ್ತದೆ ಮತ್ತು ತ್ಯಾಗಕ್ಕೆ ಹಾನಿ ಬಿಡುತ್ತದೆ. ತ್ಯಾಗದ ಕರ್ತವ್ಯ ಮನುಷ್ಯನನ್ನು ಮೃಗದಿಂದ ಬೇರ್ಪಡಿಸುತ್ತದೆ.

ಬದುಕನ್ನು ಹೀಗೆ ಅರ್ಥಮಾಡಿಕೊಂಡಲ್ಲಿ ಅದು ನೀರಸ ಮತ್ತು ಕಲಾರಹಿತವಾಗುತ್ತದೆ ಮತ್ತು ಗೃಹಸ್ಥನಿಗೆ ಯಾವುದೇ ಅವಕಾಶ ಕೊಡುವುದಿಲ್ಲ ಎಂದು ಕೆಲವರು ಆಕ್ಷೇಪಿಸುತ್ತಾರೆ. ಆದರೆ ಇಲ್ಲಿ ತ್ಯಾಗ ಎಂದರೆ ಪ್ರಪಂಚವನ್ನು ತೊರೆದು ಕಾಡಿಗೆ ನಿರ್ಗಮಿಸುವುದು ಎಂದು ಅರ್ಥವಲ್ಲ. ತ್ಯಾಗದ ಮನೋಭಾವ ಬದುಕಿನ ಎಲ್ಲ ಚಟುವಟಿಕೆಗಳನ್ನು ನಿಯಂತ್ರಿಸಬೇಕು. ಗೃಹಸ್ಥನೊಬ್ಬನು ಬದುಕನ್ನು ಒಂದು ಭೋಗವಾಗಿ ಎಣಿಸದೆ ಒಂದು ಕರ್ತವ್ಯವಾಗಿ ಪರಿಗಣಿಸಿದರೆ ಅವನು ಗೃಹಸ್ಥನಾಗದೆ ಹೋಗುವುದಿಲ್ಲ. ತ್ಯಾಗದ ಮನೋಭಾವದಿಂದ ವ್ಯವಹಾರ ನಡೆಸುವ ಒಬ್ಬ ವರ್ತಕನ ಕೈಗಳ ಮೂಲಕ ಕೋಟಿಗಟ್ಟಲೆ ಸಾಗುತ್ತಿರಬಹುದು, ಆದರೆ ಅವನು ನಿಯಮವನ್ನು ಪಾಲಿಸಿದರೆ ತನ್ನ ಶಕ್ತಿ ಸಾಮರ್ಥ್ಯಗಳನ್ನು ಸೇವೆಗಾಗಿ ವಿನಿಯೋಗಿಸುತ್ತಾನೆ. ಆದ್ದರಿಂದ ಅವನು ಮೋಸಮಾಡುವುದಿಲ್ಲ ಅಥವಾ ಸಟ್ಟಾವ್ಯಾಪಾರ ನಡೆಸುವುದಿಲ್ಲ, ಸರಳ ಜೀವನ ನಡೆಸುತ್ತಾನೆ, ಯಾವ ಜೀವಂತ ವ್ಯಕ್ತಿಯನ್ನೂ ನೋಯಿಸುವುದಿಲ್ಲ ಮತ್ತು ಯಾರಿಗೇ ಹಾನಿಮಾಡುವ ಬದಲು ಲಕ್ಷಗಟ್ಟಲೆ ನಷ್ಟಮಾಡಿಕೊಳ್ಳುತ್ತಾನೆ. ಈ ಬಗೆಯ ವರ್ತಕ ನನ್ನ

ಕಲ್ಪನೆಯಲ್ಲಿ ಮಾತ್ರ ಇರುತ್ತಾನೆ ಎಂದು ಯಾರೂ ಆತುರದಿಂದ ಭಾವಿಸದಿರಲಿ. ಪ್ರಪಂಚದ ಅದೃಷ್ಟ, ಈ ಬಗೆಯವನು ಪಶ್ಚಿಮದೇಶದಲ್ಲಿ ಹಾಗೂ ಪೂರ್ವದೇಶದಲ್ಲಿ ಇರುತ್ತಾನೆ. ಇಂಥ ವರ್ತಕರನ್ನು ಬೆರಳಿನ ತುದಿಗಳಲ್ಲಿ ಎಣಿಸಬಹುದು ಎನ್ನುವುದು ನಿಜ, ಆದರೆ ಈ ವರ್ಣನೆಗೆ ಸರಿಹೊಂದುವ ಒಂದೇ ಒಂದು ಜೀವಂತ ನಿದರ್ಶನ ಸಿಗುವಂತಾದ ಕೂಡಲೇ ಆ ವರ್ಗ ಕಾಲ್ಪನಿಕ ಸ್ಥಿತಿಯನ್ನು ಕಳೆದುಕೊಳ್ಳುತ್ತದೆ. ಅಂಥ ತ್ಯಾಗಿಗಳು ತಮ್ಮ ಕೆಲಸದ ಮೂಲಕ ತಮ್ಮ ಜೀವನೋಪಾಯವನ್ನು ಪಡೆದುಕೊಳ್ಳುತ್ತಾರೆ ಎನ್ನುವುದರಲ್ಲಿ ಸಂಶಯವಿಲ್ಲ. ಆದರೆ ಜೀವನೋಪಾಯ ಅವರ ಗುರಿಯಲ್ಲ, ಆದರೆ ಅದು ಅವರ ವೃತ್ತಿಯ ಒಂದು ಉಪಫಲ ಮಾತ್ರ ತ್ಯಾಗದ ಬದುಕು ಕಲೆಯ ಶಿಖರ ಮತ್ತು ನಿಜವಾದ ಸಂತೋಷದಿಂದ ತುಂಬಿರುತ್ತದೆ. ಯಜ್ಞವು ಒಬ್ಬನಿಗೆ ಹೊರೆಯಾಗಿ ಅಥವಾ ಕಿರಿಕಿರಿಯಾಗಿ ಕಂಡುಬಂದರೆ ಅದು ಯಜ್ಞವಲ್ಲ. ಭೋಗಾಸಕ್ತಿ ವಿನಾಶಕ್ಕೆ ಒಯ್ಯುತ್ತದೆ ಮತ್ತು ತ್ಯಾಗ ಅಮೃತತ್ವಕ್ಕೆ ಒಯ್ಯುತ್ತದೆ. ಸಂತೋಷಕ್ಕೆ ಸ್ವತಂತ್ರ ಅಸ್ತಿತ್ವವಿಲ್ಲ. ಅದು ನಮ್ಮ ಜೀವನ ದೃಷ್ಟಿಯನ್ನು ಅವಲಂಬಿಸಿದೆ. ಒಬ್ಬನು ನಾಟಕದ ದೃಶ್ಯಪರದೆಯನ್ನು ನೋಡಿ ಸಂತೋಷ ಪಡುತ್ತಾನೆ; ಇನ್ನೊಬ್ಬನು ಆಕಾಶದಲ್ಲಿ ಕಾಣಿಸಿಕೊಳ್ಳುವ ಚಿರನೂತನ ದೃಶ್ಯಗಳನ್ನು ನೋಡಿ ಸಂತೋಷಪಡುತ್ತಾನೆ. ಆದ್ದರಿಂದ ಸಂತೋಷವು ವೈಯಕ್ತಿಕ ಮತ್ತು ರಾಷ್ಟ್ರೀಯ ಶಿಕ್ಷಣಕ್ಕೆ ಸಂಬಂಧಿಸಿದ ವಿಷಯ. ಚಿಕ್ಕಮಕ್ಕಳಾಗಿದ್ದಾಗ ಯಾವುದನ್ನು ಮೆಚ್ಚಬೇಕೆಂದು ನಮಗೆ ಕಲಿಸಲಾಗಿತ್ತೋ ಆ ವಸ್ತುಗಳನ್ನು ನಾವು ಪ್ರೀತಿಸುತ್ತೇವೆ. ವಿವಿಧ ರಾಷ್ಟ್ರೀಯ ಅಭಿರುಚಿಗಳಿಗೆ ನಿದರ್ಶನಗಳನ್ನು ಸುಲಭವಾಗಿ ನೀಡಬಹುದು.

ಮತ್ತೆ, ತಾವು ನಿಸ್ವಾರ್ಥ ಸೇವೆ ಸಲ್ಲಿಸುತ್ತಿರುವುದರಿಂದ ಕೆಲವು ತ್ಯಾಗಿಗಳು ಜನಗಳಿಂದ ತಮಗೆ ಅಗತ್ಯವಾದ ಎಲ್ಲವನ್ನೂ ಮತ್ತು ಅಗತ್ಯವಿಲ್ಲದ ಅನೇಕ ವಸ್ತುಗಳನ್ನು ಸ್ವೀಕರಿಸಲು ಸ್ವತಂತ್ರರಾಗಿದ್ದಾರೆಂದು ಕಲ್ಪಿಸಿಕೊಳ್ಳುತ್ತಾರೆ. ಈ ಭಾವನೆ ವ್ಯಕ್ತಿಯೊಬ್ಬನನ್ನು ಪ್ರಭಾವಿಸಿದ ಕೂಡಲೇ, ಅವನೊಬ್ಬ ಸೇವಕನಾಗಿ ಉಳಿಯದೆ ಜನಗಳ ಮೇಲೆ ಒಬ್ಬ ಸರ್ವಾಧಿಕಾರಿಯಾಗುತ್ತಾನೆ.

ಸೇವೆ ಮಾಡಲು ಬಯಸುವವನು ತನ್ನ ಸ್ವಂತ ಅನುಕೂಲಗಳ ಬಗ್ಗೆ ಸ್ವಲ್ಪವೂ ಚಿಂತಿಸುವುದಿಲ್ಲ. ಅವುಗಳನ್ನು ನೋಡಿಕೊಳ್ಳಲು ಅಥವಾ ಕಡೆಗಣಿಸಲು ಆತ, ಸ್ವರ್ಗದಲ್ಲಿರುವ ತನ್ನ ಪ್ರಭುವಿಗೆ ಬಿಡುತ್ತಾನೆ. ಆದ್ದರಿಂದ ಅವನು ತನಗೆ ಸಿಗುವ ಎಲ್ಲವುಗಳ ಹೊರೆ ಹೇರಿಕೊಳ್ಳುವುದಿಲ್ಲ. ಅವನಿಗೆ ಕಡ್ಡಾಯವಾಗಿ ಅಗತ್ಯವಾದುದನ್ನು ಮಾತ್ರ ತೆಗೆದುಕೊಳ್ಳುತ್ತಾನೆ ಮತ್ತು ಉಳಿದುದನ್ನು ಬಿಡುತ್ತಾನೆ. ಅವನಿಗೆ ಅನಾನುಕೂಲವಾದರೂ, ಅವನು ಶಾಂತನಾಗಿರುತ್ತಾನೆ, ಕೋಪ

ಗೊಳ್ಳುವುದಿಲ್ಲ ಮತ್ತು ಮನಸ್ಸು ಕೆಡಿಸಿಕೊಳ್ಳುವುದಿಲ್ಲ. ಅವನ ಸೇವೆ, ಧರ್ಮದಂತೆ, ತನ್ನಷ್ಟರಿಂದಲೇ ತನಗೆ ಪ್ರತಿಫಲ. ಅವನು ಅದರಿಂದ ತೃಪ್ತನಾಗುತ್ತಾನೆ.

ಮತ್ತೆ, ಸೇವೆಯನ್ನು ಯಾರೂ ಅಲಕ್ಷಿಸಬಾರದು ಅಥವಾ ವಿಳಂಬ ಮಾಡಕೂಡದು. ತನ್ನ ಸ್ವಂತ ವ್ಯವಹಾರದಲ್ಲಿ ಮಾತ್ರ ಶ್ರದ್ಧೆ ವಹಿಸಬೇಕು ಮತ್ತು ಪ್ರತಿಫಲವಿಲ್ಲದ ಸಾರ್ವಜನಿಕ ವ್ಯವಹಾರವನ್ನು ತನ್ನ ಇಷ್ಟಾನುಸಾರ ಹೇಗೇ ಬೇಕಾದರೂ ಮತ್ತು ಯಾವಾಗ ಬೇಕಾದರೂ ನೆರವೇರಿಸಬಹುದು ಎಂದು ಭಾವಿಸುವವನು ಯಜ್ಞವಿಜ್ಞಾನ ಬಾಲಪಾಠಗಳನ್ನೇ ಇನ್ನೂ ಕಲಿಯಬೇಕಾಗಿದೆ. ಇತರರಿಗೆ ಸಲ್ಲಿಸುವ ಸ್ವಯಂಸೇವೆ ಒಬ್ಬನ ಅತ್ಯುನ್ನತ ಶಕ್ತಿ ಸಾಮರ್ಥ್ಯವನ್ನು ಅಪೇಕ್ಷಿಸುತ್ತದೆ ಮತ್ತು ಸ್ವಂತಕ್ಕೆ ಮಾಡಿಕೊಳ್ಳುವ ಸೇವೆಗಿಂತ ಆದ್ಯತೆ ಪಡೆಯಬೇಕು. ವಾಸ್ತವವಾಗಿ, ಶುದ್ಧ ಭಕ್ತನು ಯಾವುದೇ ಪರಿಮಿತಿಗಳನ್ನು ಹಾಕಿಕೊಳ್ಳದೆ ತನ್ನನ್ನು ಮಾನವಸೇವೆಗೆ ಸಮರ್ಪಿಸಿಕೊಳ್ಳುತ್ತಾನೆ.

*ಯರವಾಡಾ ಮಂದಿರದಿಂದ*, ಅಧ್ಯಾಯ **XIX-XV**



# 20

# ಬ್ರಾಹ್ಮಣ ಬ್ರಾಹ್ಮಣೇತರ ಸಮಸ್ಯೆ

ಇಂದು ನಾವು ನೋಡುವುದು ಶುದ್ಧವಾದ ಹಿಂದೂಧರ್ಮವನ್ನಲ್ಲ, ಅದರ ವಿಕಟಾನುಕೃತಿಯನ್ನು ಮಾತ್ರ. ಇಲ್ಲದಾಗಿದ್ದಲ್ಲಿ ಅದರ ಪರವಾಗಿ ನನ್ನ ವಾದ ಬೇಕಾಗುತ್ತಿರಲಿಲ್ಲ. ನಾನು ಪರಿಶುದ್ಧನಾಗಿದ್ದಲ್ಲಿ ನಿಮಗೆ ನಾನು ಅದನ್ನು ಹೇಳುವ ಅಗತ್ಯ ಇಲ್ಲದಿರುವಂತೆಯೇ, ಅದು ತನ್ನ ವಿಷಯ ತಾನೇ ಹೇಳಿಕೊಳ್ಳುತ್ತಿತ್ತು. ದೇವರು ತನ್ನ ನಾಲಿಗೆಯ ಮೂಲಕ ಹೇಳುವುದಿಲ್ಲ. ಮನುಷ್ಯನು ದೇವರನ್ನು ಸಮೀಪಿಸುತ್ತಿರುವ ಮಟ್ಟಿಗೆ ತಾನೂ ದೇವರಂತೆಯೇ ಆಗುತ್ತಾನೆ. ನನ್ನ ದೇಹವು ಒಳಗಿರುವ ಆತ್ಮನ ಶಕ್ತಿಯ ಮೇಲಿನ ಒಂದು ಮಿತಿಯಾಗಿರುತ್ತದೆ ಎಂದು ಹಿಂದೂಧರ್ಮ ನನಗೆ ಬೋಧಿಸುತ್ತದೆ.

ಪಶ್ಚಿಮದೇಶಗಳಲ್ಲಿ ಜನ ಭೌತಿಕವಿಷಯಗಳಲ್ಲಿ ಆಶ್ಚರ್ಯಕರ ಆವಿಷ್ಕಾರಗಳನ್ನು ಮಾಡುವಂತೆಯೇ ಹಿಂದೂಧರ್ಮ ಧರ್ಮದ, ಅಧ್ಯಾತ್ಮದ, ಆತ್ಮದ ವಿಷಯಗಳಲ್ಲಿ ಇನ್ನೂ ಹೆಚ್ಚಿನ ಅದ್ಭುತ ಆವಿಷ್ಕಾರಗಳನ್ನು ಮಾಡಿದೆ. ಈ ದೊಡ್ಡ ಮತ್ತು ಸುಂದರ ಆವಿಷ್ಕಾರಗಗಳನ್ನು ನೋಡಲು ನಮಗೆ ಕಣ್ಣಿಲ್ಲ. ಪಾಶ್ಚಾತ್ಯ ವಿಜ್ಞಾನ ಸಾಧಿಸಿರುವ ಭೌತಿಕಪ್ರಗತಿಯಿಂದ ನಮ್ಮ ಕಣ್ಣು ಕೋರೈಸಿಹೋಗಿದೆ. ಆ ಪ್ರಗತಿಯಿಂದ ನಾನು ಮೋಹಗೊಂಡಿಲ್ಲ. ವಾಸ್ತವವಾಗಿ, ಭೌತಿಕತೆಯ ರಭಸದ ಪ್ರವಾಹವನ್ನು ತಡೆಯುವ ತನ್ನ ವಿಶೇಷ ನಿಯೋಗವನ್ನು ಭಾರತವು ನೆರವೇರಿಸುವಂತಾಗಲು ಭಗವಂತನು ವಿವೇಕದಿಂದ ಭಾರತವು ಆ ಹಾದಿಯಲ್ಲಿ ಹೋಗುವುದನ್ನು ತಡೆದನೋ ಎಂಬಂತೆ ಕಾಣುತ್ತದೆ. ಒಟ್ಟಿನಲ್ಲಿ, ಹಿಂದೂಧರ್ಮವನ್ನು ಇಂದಿನವರೆಗೆ ಜೀವಂತವಾಗಿ ಇಟ್ಟಿರುವ ಯಾವುದೋ

ಒಂದು ಅದರಲ್ಲಿದೆ. ಬ್ಯಾಬಿಲೋನ್, ಸಿರಿಯ, ಪರ್ಷಿಯ ಮತ್ತು ಈಜಿಪ್ಟುಗಳ ನಾಗರಿಕತೆಗಳ ಪತನವನ್ನು ಅದು ಕಂಡಿದೆ. ನಿಮ್ಮ ಸುತ್ತಲೂ ಕಣ್ಣು ಹಾಯಿಸಿ. ರೋಂ ಮತ್ತು ಗ್ರೀಸ್ ಎಲ್ಲಿವೆ? ಗಿಬ್ಬನನ ಇಟಲಿ ಅಥವಾ ಪ್ರಾಚೀನ ರೋಂನ್ನು – ಏಕೆಂದರೆ ರೋಮೇ ಇಟಲಿಯಾಗಿತ್ತು – ಇಂದು ನೀವು ಎಲ್ಲಾದರೂ ಕಾಣುತ್ತೀರಾ? ಗ್ರೀಸ್‌ಗೆ ಹೊಗಿ. ಜಗತ್ಪ್ರಸಿದ್ಧವಾದ ಅಟ್ಟಿಕ್ ನಾಗರಿಕತೆ ಎಲ್ಲಿದೆ? ಅನಂತರ ಭಾರತಕ್ಕೆ ಬನ್ನಿ. ಅತ್ಯಂತ ಪ್ರಾಚೀನ ದಾಖಲೆಗಳನ್ನು ಪರಿಶೀಲಿಸಿ. ಅನಂತರ ನಿಮ್ಮ ಸುತ್ತ ನೋಡಿ. "ನಿಜ, ಇಲ್ಲಿ ಪ್ರಾಚೀನ ಭಾರತ ಇನ್ನೂ ಬದುಕುರುವುದನ್ನು ನಾನು ಕಾಣುತ್ತೇನೆ" ಎಂದು ನೀವು ಬಲವಂತವಾಗಿ ಹೇಳಬೇಕಾಗುತ್ತದೆ. ತಿಪ್ಪೆರಾಶಿಗಳು ಅಲ್ಲಿ ಇಲ್ಲಿ ಇವೆ ಎಂಬುದು ನಿಜ. ಆದರೆ ಅವುಗಳ ಅಡಿ ಅಮೂಲ್ಯ ನಿಧಿಗಳು ಹೂತುಹೋಗಿವೆ. ಹಿಂದೂಧರ್ಮ ಉಳಿದುಬಂದಿರುವುದಕ್ಕೆ ಕಾರಣ ಅದು ತನ್ನ ಮುಂದೆ ಇರಿಸಿಕೊಂಡ ಗುರಿ ಭೌತಿಕ ಮಾರ್ಗದಲ್ಲಿನ ಬೆಳವಣಿಗೆಯಾಗಿರದೆ ಆಧ್ಯಾತ್ಮಿಕ ಮಾರ್ಗದಲ್ಲಿನ ಬೆಳವಣಿಗೆಯಾಗಿತ್ತು.

ಅದರ ಅನೇಕ ಕೊಡುಗೆಗಳಲ್ಲಿ ಮೂಕಸೃಷ್ಟಿಯೊಡನೆ ಮಾನವನ ತಾದಾತ್ಮ್ಯದ ಕಲ್ಪನೆ ಒಂದು ಅನನ್ಯವಾದುದು. ಗೋಪೂಜೆ ನನಗೆ ಒಂದು ದೊಡ್ಡ ಕಲ್ಪನೆ. ಅದನ್ನು ವಿಸ್ತರಿಸಲು ಸಾಧ್ಯವಿದೆ. ಆಧುನಿಕ ಮತಾಂತರಿಕೆಯಿಂದ ಹಿಂದೂಧರ್ಮ ಮುಕ್ತವಾಗಿರುವುದೂ ನನಗೆ ಒಂದು ಅಮೂಲ್ಯವಿಷಯ. ಅದಕ್ಕೆ ಧರ್ಮೋಪದೇಶದ ಅಗತ್ಯವಿಲ್ಲ. "ಬಾಳನ್ನು ನಡೆಸಿ" ಎಂದು ಅದು ಹೇಳುತ್ತದೆ. ಬಾಳನ್ನು ನಡೆಸುವುದು ನನ್ನ ಕೆಲಸ, ನಿಮ್ಮ ಕೆಲಸ. ಅನಂತರ ನಾವು ಯುಗಾಂತರಗಳ ಮೇಲೆ ಅದರ ಪ್ರಭಾವವನ್ನು ಬಿಡುತ್ತೇವೆ. ಆಮೇಲೆ ಮಾನವವ್ಯಕ್ತಿಗಳ ರೂಪದಲ್ಲಿ ಅದರ ಕೊಡುಗೆಯನ್ನು ತೆಗೆದುಕೊಳ್ಳಿ. ಇತ್ತೀಚಿನ ಕಾಲದ ಹೆಸರುಗಳ ಮಾತು ಹಾಗಿರಲಿ, ರಾಮಾನುಜ, ಚೈತನ್ಯ, ರಾಮಕೃಷ್ಣರು ಹಿಂದೂಧರ್ಮದ ಮೇಲೆ ತಮ್ಮ ಮುದ್ರೆ ಬಿಟ್ಟಿದ್ದಾರೆ. ಹಿಂದೂಧರ್ಮ ಖಂಡಿತವಾಗಿಯೂ ಉಡುಗಿದ ಶಕ್ತಿಯಾಗಲಿ ಮೃತಧರ್ಮವಾಗಲಿ ಆಗಿಲ್ಲ.

ಅನಂತರ ನಾಲ್ಕು ಆಶ್ರಮಗಳ ಕೊಡುಗೆಯಿದೆ. ಇದೊಂದು ಅನನ್ಯವಾದ ಕೊಡುಗೆ. ಅದಕ್ಕೆ ಸದೃಶವಾದುದು ಇಡೀ ಪ್ರಪಂಚದಲ್ಲಿಯೇ ಇಲ್ಲ. ಕ್ಯಾಥೊಲಿಕರಲ್ಲಿ ಬ್ರಹ್ಮಚಾರಿಗಳಿಗೆ ಸಂವಾದಿಯಾದ ಅವಿವಾಹಿತರ ವರ್ಗವೊಂದಿದೆ, ಆದರೆ ಅದು ಒಂದು ಸಂಪ್ರದಾಯವಾಗಿ ಅಲ್ಲ. ಭಾರತದಲ್ಲಾದರೋ ಪ್ರತಿ ಹುಡುಗನೂ ಮೊದಲನೆ ಆಶ್ರಮವನ್ನು ಪೂರೈಸಬೇಕಾಗಿದೆ. ಇದು ಎಂಥ ಅದ್ಭುತ ಕಲ್ಪನೆಯಾಗಿತ್ತು! ಇಂದು ನಮ್ಮ ಕಣ್ಣುಗಳು ಮಲಿನಗೊಂಡಿವೆ, ಆಲೋಚನೆಗಳು

ಇನ್ನೂ ಕೊಳಕಾಗಿವೆ ಮತ್ತು ದೇಹಗಳು ಎಲ್ಲಕ್ಕಿಂತ ಹೆಚ್ಚು ಮಲಿನವಾಗಿವೆ. ಏಕೆಂದರೆ ನಾವು ಹಿಂದೂಧರ್ಮವನ್ನು ನಿರಾಕರಿಸುತ್ತಿದ್ದೇವೆ.

ನಾನು ಹೇಳದಿರುವ ಇನ್ನೂ ಒಂದು ವಿಷಯವಿದೆ. ದೇಹಾಂತರ ಪ್ರಾಪ್ತಿ ಒಂದು ಊಹೆಯಲ್ಲ, ಅದೊಂದು ವಸ್ತುಭೂತ ಸಂಗತಿ ಎನ್ನುವುದು ಯೂರೋಪಿಗೆ ಮೂಡುತ್ತಿತ್ತು ಎಂದು ನಲವತ್ತು ವರ್ಷಗಳ ಹಿಂದೆಯೇ ಮ್ಯಾಕ್ಸ್ ಮುಲ್ಲರ್ ಹೇಳಿದ. ಸಂಪೂರ್ಣವಾಗಿ ಅದು ಹಿಂದೂಧರ್ಮದ ಕೊಡುಗೆ.

ಇಂದು ವರ್ಣಾಶ್ರಮಧರ್ಮವನ್ನು ಮತ್ತು ಹಿಂದೂಧರ್ಮವನ್ನು ಅದರ ಅನುಯಾಯಿಗಳು ತಪ್ಪಾಗಿ ನಿರೂಪಿಸುತ್ತಿದ್ದಾರೆ ಮತ್ತು ಅವನ್ನು ನಿರಾಕರಿಸುತ್ತಿದ್ದಾರೆ. ಇದಕ್ಕೆ ಪರಿಹಾರ ಅವುಗಳ ನಾಶವಲ್ಲ, ಅವುಗಳ ತಿದ್ದುಪಾಟು. ನಿಜವಾದ ಹಿಂದೂ ಮನೋಭಾವವನ್ನು ನಾವು ನಮ್ಮಲ್ಲಿ ಮತ್ತೆ ಬೆಳೆಸಿಕೊಳ್ಳೋಣ, ಅನಂತರ ಅದು ನಮ್ಮ ಆತ್ಮಕ್ಕೆ ತೃಪ್ತಿಕೊಡುತ್ತದೆಯೇ ಅಥವಾ ಇಲ್ಲವೇ ಎಂದು ಕೇಳೋಣ.

*ಯಂಗ್ ಇಂಡಿಯಾ*, 24 ನವೆಂಬರ್ 1927



# 21

# ದೇವರು ಮತ್ತು ಕಾಂಗ್ರೆಸ್ಸು

ನನಗೆ ದೇವರು ಎಂದರೆ ಸತ್ಯ ಮತ್ತು ಪ್ರೇಮ; ದೇವರು ನೀತಿ ಮತ್ತು ನೀತಿಶಾಸ್ತ್ರ; ದೇವರು ನಿರ್ಭಯತೆ. ದೇವರು ಬೆಳಕು ಮತ್ತು ಬದುಕಿನ ಮೂಲ. ಆದರೂ ಇವೆಲ್ಲಕ್ಕೂ ಮೇಲೆ ಮತ್ತು ಆಚೆ ಇದ್ದಾನೆ. ದೇವರು ಅಂತಃಸಾಕ್ಷಿ ಅವನು ನಾಸ್ತಿಕನ ನಾಸ್ತಿಕತೆ ಕೂಡ. ಏಕೆಂದರೆ ಅವನ ಅಪರಿಮಿತ ಪ್ರೇಮದಲ್ಲಿ ದೇವರು ನಾಸ್ತಿಕನಿಗೆ ಬದುಕಲು ಅವಕಾಶನೀಡುತ್ತಾನೆ. ಅವನು ಹೃದಯಗಳ ಪರೀಕ್ಷಕ. ಅವನು ಮಾತು ಮತ್ತು ತರ್ಕಗಳನ್ನು ಮೀರಿದ್ದಾನೆ. ನಮ್ಮನ್ನು ಮತ್ತು ನಮ್ಮ ಹೃದಯಗಳನ್ನು ಅವನು ನಮಗಿಂತಲೂ ಚೆನ್ನಾಗಿ ಅರಿತಿರುತ್ತಾನೆ. ಅವನು ನಮ್ಮ ಮಾತುಗಳನ್ನು ನಂಬುವುದಿಲ್ಲ, ಏಕೆಂದರೆ ನಾವು – ಕೆಲವರು ಅರಿತೋ ಮತ್ತು ಇತರರು ಅರಿಯದೆಯೋ ಅನೇಕವೇಳೆ ಆ ಅರ್ಥದಲ್ಲಿ ಆಡಿಲ್ಲ ಎನ್ನುವುದು ಅವನಿಗೆ ಗೊತ್ತು. ಅವನ ಸಶರೀರ ಅಸ್ತಿತ್ವದ ಅಗತ್ಯವಿರುವವರಿಗೆ ಅವನು ಸಶರೀರ ದೇವರು. ಅವನ ಸ್ಪರ್ಶ ಬೇಕೆನಿಸುವವರಿಗೆ ಅವನು ದೇಹದಾರಿಯಾಗಿದ್ದಾನೆ. ಅವನು ಅತ್ಯಂತ ಪರಿಶುದ್ಧವಾದ ಮೂಲಸಾರ. ಶ್ರದ್ಧೆಯುಳ್ಳವರಿಗೆ ಅವನು ಕೇವಲ ಅಸ್ತಿತ್ವ ಹೊಂದಿದ್ದಾನೆ. ಅವನು ಎಲ್ಲರಿಗೂ ಎಲ್ಲವೂ ಆಗಿದ್ದಾನೆ. ಅವನು ನಮ್ಮೊಳಗೆ ಇದ್ದಾನೆ, ಆದರೆ ನಮಗಿಂತ ಮೇಲೆ ಮತ್ತು ಆಚೆಗೂ ಇದ್ದಾನೆ. ಕಾಂಗ್ರೆಸ್ಸಿನಿಂದ 'ದೇವರು' ಎಂಬ ಪದವನ್ನು ಬಹಿಷ್ಕರಿಸಬಹುದು, ಆದರೆ ಆ ವಸ್ತುವನ್ನೇ ಬಹಿಷ್ಕರಿಸುವ ಶಕ್ತಿ ಯಾರಿಗೂ ಇಲ್ಲ. ಗಂಭೀರವಾದ ಪ್ರತಿಜ್ಞೆಯೊಂದನ್ನು ದೇವರ ಹೆಸರಿನಲ್ಲಿ ಮಾಡಿರದಿದ್ದರೆ ಅದಕ್ಕೆ ಏನು ತಾನೇ ಬೆಲೆ? ಖಂಡಿತವಾಗಿಯೂ ಅಂತಃಸಾಕ್ಷಿ ಎನುವುದು

ದೇವರು ಎಂದು ಕರೆಯುವ ಮೂರು ಅಕ್ಷರಗಳ ಸರಳ ಸಂಯೋಜನೆಯ ನಿಸ್ಸತ್ವವಾದ ಹಾಗೂ ಪ್ರಯಾಸಪಟ್ಟು ಮಾಡಿದ ಭಾವಾನುವಾದ ಮಾತ್ರ. ಅವನ ಹೆಸರಿನಲ್ಲಿ ಘೋರವಾದ ಅನೈತಿಕ ಕೃತ್ಯಗಳು ಅಥವಾ ಅಮಾನವೀಯ ಕ್ರೂರಕೃತ್ಯಗಳು ನಡೆದಿವೆ ಎಂಬ ಕಾರಣದಿಂದ ಅವನು ಅಸ್ತಿತ್ವವನ್ನೇ ಕಳೆದುಕೊಳ್ಳುವುದಿಲ್ಲ. ಅವನು ಬಹಳ ತಾಳಿಕೊಳ್ಳುತ್ತಾನೆ. ಅವನು ಸಹನಶೀಲ. ಆದರೆ ಅವನು ಭಯಂಕರ ಕೂಡ. ಈ ಲೋಕ ಮತ್ತು ಬರುವ ಲೋಕದಲ್ಲಿ ಕೂಡ ಅವನೊಬ್ಬ ಅತ್ಯಂತ ತಗಾದೆಯ ವ್ಯಕ್ತಿ. ನಾವು ನಮ್ಮ ನೆರೆಹೊರೆಯವರಿಗೆ – ಮನುಷ್ಯರಿಗೆ ಮತ್ತು ಪ್ರಾಣಿಗಳಿಗೆ – ಅಳೆದು ಕೊಡುವುದನ್ನೇ ಅವನು ನಮಗೆ ಅಳೆದುಕೊಡುತ್ತಾನೆ. ಅವನ ಹತ್ತಿರ ಅಜ್ಞಾನಕ್ಕೆ ವಿನಾಯಿತಿ ಇಲ್ಲ. ಆದರೂ ಅವನು ಸದಾ ಕ್ಷಮಾಪರ, ಏಕೆಂದರೆ ಪಶ್ಚಾತ್ತಾಪ ಪಡಲು ಅವನು ನಮಗೆ ಯಾವಗಲೂ ಅವಕಾಶ ನೀಡುತ್ತಾನೆ. ಪ್ರಪಂಚವು ಅರಿತಿರುವ ಅತಿದೊಡ್ಡ ಪ್ರಜಾಪ್ರಭುತ್ವವಾದಿ ಅವನು, ಏಕೆಂದರೆ ಒಳಿತುಕೆಡುಕುಗಳ ನಡುವೆ ನಮ್ಮ ಸ್ವಂತ ಆಯ್ಕೆ ಮಾಡಲು ಅವನು ನಮ್ಮನ್ನು 'ನಿಃಶೃಂಖಲ'ರನ್ನಾಗಿ ಬಿಡುತ್ತಾನೆ. ಅವನಂತಹ ನಿರಂಕುಶಾಧಿಕಾರಿಯನ್ನು ನಾವು ಕಂಡು–ಕೇಳಿಲ್ಲ. ಏಕೆಂದರೆ ಅನೇಕವೇಳೆ ಅವನು ನಮ್ಮ ತುಟಿಗೆ ಬಂದಿರುವ ಬಟ್ಟಲನ್ನು ಕಿತ್ತೆಸಿಯುತ್ತಾನೆ ಮತ್ತು ಮುಕ್ತ ಸ್ವೇಚ್ಛಾಸಂಕಲ್ಪದ ಮುಸುಕಿನಲ್ಲಿ ನಮಗೆ ಎಷ್ಟು ಅತ್ಯಲ್ಪ ಅವಕಾಶ ನೀಡುತ್ತಾನೆಂದರೆ ಅದು ನಮಗೆ ನಷ್ಟವುಂಟುಮಾಡಿ ಅವನಿಗೆ ಮಾತ್ರ ಸಂತೋಷ ಒದಗಿಸುತ್ತದೆ. ಆದ್ದರಿಂದಲೇ ಹಿಂದೂಧರ್ಮವು ಅವೆಲ್ಲವನ್ನೂ ಅವನ ಆಟ ಅಥವಾ ಲೀಲೆ ಎಂದು ಅಥವಾ ಅವೆಲ್ಲವು ಭ್ರಾಂತಿ ಅಥವಾ ಮಾಯೆಯೆಂದು ಕರೆಯುತ್ತದೆ. ನಾವು ಯಾರೂ ಇಲ್ಲ. ಇರುವವನು ಅವನೊಬ್ಬನೇ. ನಾವು ಇರಬೇಕಾದರೆ ನಾವು ಸದಾ ಅವನ ಸ್ತೋತ್ರ ಹಾಡಬೇಕು ಮತ್ತು ಅವನ ಇಚ್ಛೆ ನೆರವೇರಿಸಬೇಕು. ಅವನ ಕೊಳಲಿನ ರಾಗಕ್ಕೆ ಕುಣಿಯೋಣ. ಆಗ ಎಲ್ಲವೂ ಸರಿಹೋಗುತ್ತದೆ.

ಯಂಗ್ ಇಂಡಿಯಾ, 5 ಮಾರ್ಚ್ 1925



# 22

# ಅದ್ವೈತವಾದ ಮತ್ತು ದೇವರು

[ಸ್ನೇಹಿತರೊಬ್ಬರ ಪ್ರಶ್ನೆಗೆ ಉತ್ತರವಾಗಿ ಗಾಂಧೀಜಿ ಹೀಗೆ ಬರೆದರು.]

ನಾನೊಬ್ಬ ದ್ವೈತವಾದಿ, ಆದರೂ ನಾನು ಅದ್ವೈತವಾದವನ್ನು ಬೆಂಬಲಿಸಬಲ್ಲೆ. ಪ್ರಪಂಚವು ಪ್ರತಿಕ್ಷಣವೂ ಬದಲಾಯಿಸುತ್ತಿದೆ. ಆದ್ದರಿಂದ ಅದು ಅಸತ್ಯ. ಅದಕ್ಕೆ ಶಾಶ್ವತವಾದ ಅಸ್ತಿತ್ವವಿಲ್ಲ. ಆದರೆ ಅದು ಸದಾ ಬದಲಾಯಿಸುತ್ತಿದ್ದರೂ, ಅದರಲ್ಲಿ ಶಾಶ್ವತವಾಗಿ ಉಳಿದುಕೊಳ್ಳುವ ಯಾವುದೋ ಒಂದು ಇದೆ. ಆದ್ದರಿಂದ ಅಷ್ಟುಮಟ್ಟಿಗೆ ಅದು ಸತ್ಯ. ಆದ್ದರಿಂದ ಅದನ್ನು ಸತ್ಯ ಹಾಗೂ ಅಸತ್ಯ ಎಂದು ಕರೆಯಲು ಮತ್ತು ಹೀಗೆ ನನ್ನನ್ನು ಒಬ್ಬ ಅನೇಕಾಂತವಾದಿ ಅಥವಾ ಸ್ಯಾದ್ವಾದಿ ಎಂದು ಕರೆಯಿಸಿಕೊಳ್ಳಲು ನನ್ನ ಆಕ್ಷೇಪವೇನೂ ಇಲ್ಲ. ಆದರೆ ನನ್ನ ಸ್ಯದ್ವಾದ ಪಂಡಿತರ ಸ್ಯಾದ್ವದವಲ್ಲ. ಅದು ವಿಲಕ್ಷಣವಾಗಿ ನನ್ನ ಸ್ವಂತದ್ದು. ನಾನು ಅವರೊಡನೆ ವಾದದಲ್ಲಿ ತೊಡಗಲಾರೆ. ನನ್ನ ದೃಷ್ಟಿಕೋನದಿಂದ ನಾನು ಯಾವಾಗಲೂ ಸರಿ ಮತ್ತು ನನ್ನ ಪ್ರಾಮಾಣಿಕ ವಿಮರ್ಶಕರ ದೃಷ್ಟಿಕೋನದಿಂದ ಅನೇಕಬಾರಿ ತಪ್ಪು ಎನ್ನುವುದು ನನ್ನ ಅನುಭವವಾಗಿದೆ. ನಮ್ಮನಮ್ಮ ದೃಷ್ಟಿಕೋನದಿಂದ ನಾವಿಬ್ಬರೂ ಸರಿ ಎಂದು ನನಗೆ ತಿಳಿದಿದೆ. ಈ ಅರಿವು ನನ್ನ ವಿರೋಧಿಗಳಿಗೆ ಅಥವಾ ವಿಮರ್ಶಕರಿಗೆ ದುರುದ್ದೇಶಗಳನ್ನು ಆರೋಪಿಸುವುದರಿಂದ ನನ್ನನ್ನು ಉಳಿಸಿದೆ. ಆನೆಯ ಏಳು ವಿಭನ್ನ ವರ್ಣನೆಗಳನ್ನು ನೀಡಿದ ಏಳು ಕುರುಡರು ಎಲ್ಲರೂ ತಮ್ಮತಮ್ಮ ದೃಷ್ಟಿಕೋನಗಳಿಂದ ಸರಿ, ಪರಸ್ಪರ ಒಬ್ಬೊಬ್ಬರ ದೃಷ್ಟಿಕೋನದಿಂದ ತಪ್ಪು ಮತ್ತು ಆನೆಯನ್ನು ಅರಿತಿದ್ದ ಮನಷ್ಯನ ದೃಷ್ಟಿಯಿಂದ ಸರಿ ಹಾಗೂ ತಪ್ಪು, ಸತ್ಯದ ಅನೇಕತ್ವದ ಈ

ಸಿದ್ಧಾಂತವನ್ನು ನಾನು ಬಹಳ ಮೆಚ್ಚುತ್ತೇನೆ. ಒಬ್ಬ ಮುಸಲ್ಮಾನನ್ನು ಅವನದೇ ದೃಷ್ಟಿಕೋನದಿಂದ ಮತ್ತು ಒಬ್ಬ ಕ್ರೈಸ್ತನನ್ನು ಅವನದರಿಂದ ಅಳೆಯಲು ನನಗೆ ಕಲಿಸಿರುವುದು ಈ ಸಿದ್ಧಾಂತವೇ. ಮೊದಲಿಗೆ ನಾನು ನನ್ನ ಪ್ರತಿಕಕ್ಷಿಗಳ ಅಜ್ಞಾನದ ಬಗ್ಗೆ ಕೋಪಗೊಳ್ಳುತ್ತಿದ್ದೆ. ಇಂದು ನಾನು ಅವರನ್ನು ಪ್ರೀತಿಸಬಲ್ಲೆ, ಏಕೆಂದರೆ ಇತರರು ನನ್ನನ್ನು ನೋಡುವಂತೆ ನನ್ನನ್ನೇ ನೋಡಿಕೊಳ್ಳುವ ಮತ್ತು ವಿಪರ್ಯಯವಾಗಿ ನಾನು ಇತರರನ್ನು ನನ್ನಂತೆಯೇ ನೋಡುವ ಕಣ್ಣು ನನಗೆ ಲಭಿಸಿದೆ. ನಾನು ಇಡೀ ಪ್ರಪಂಚವನ್ನೇ ನನ್ನ ತೆಕ್ಕೆಯಲ್ಲಿ ಇಟ್ಟುಕೊಳ್ಳಲು ಇಚ್ಛಿಸುತ್ತೇನೆ. ನನ್ನ ಅನೇಕಾಂತವು ಸತ್ಯ ಅಹಿಂಸೆಗಳ ಉಭಯಸಿದ್ಧಾಂತದ ಫಲ.

ದೇವರು ಎಂಥವನೆಂದು ನಾನು ನಂಬಿದ್ದೇನೆಯೋ ಅದಕ್ಕೆ ಸರಿಯಾಗಿ ನಾನು ಅವನ ಬಗ್ಗೆ ಮಾತನಾಡುತ್ತೇನೆ. ಅವನು ಸೃಷ್ಟಿಕಾರಕ ಹಾಗೂ ಅಸೃಷ್ಟಿಕಾರಕ ಎಂದು ನಾನು ನಂಬುತ್ತೇನೆ. ಇದು ಕೂಡ ಸತ್ಯದ ಅನೇಕತ್ವ ಸಿದ್ಧಾಂತವನ್ನು ನಾನು ಒಪ್ಪಿಕೊಂಡಿರುವುದರ ಫಲ. ಜೈನರ ವೇದಿಕೆಯಿಂದ ನಾನು ದೇವರ ಅಸೃಷ್ಟಿಕಾರಕ ಅಂಶವನ್ನು ಸಮರ್ಥಿಸುತ್ತೇನೆ. ಮತ್ತು ರಾಮಾನುಜರದ್ದರಿಂದ ಸೃಷ್ಟಿಕಾರಕ ಅಂಶವನ್ನು ಸಮರ್ಥಿಸುತ್ತೇನೆ. ನಿಜದಲ್ಲಿ ನಾವೆಲ್ಲ ಅಚಿಂತ್ಯವಾದುದನ್ನು ಚಿಂತಿಸುತ್ತಿದ್ದೇವೆ, ಅವರ್ಣನೀಯವಾದುದನ್ನು ವರ್ಣಿಸುತ್ತಿದ್ದೇವೆ ಮತ್ತು ಅಜ್ಞೇಯವಾದುದನ್ನು ಅರಿಯಲು ಪ್ರಯತ್ನಿಸುತ್ತಿದ್ದೇವೆ. ಆದ್ದರಿಂದಲೇ ನಮ್ಮ ಮಾತು ತೊದಲುತ್ತದೆ, ಸಾಲದೆ ಹೋಗಿದೆ ಮತ್ತು ಪರಸ್ಪರ ವಿರುದ್ಧ ಕೂಡ ಆಗಿದೆ. ಆದ್ದರಿಂದಲೇ ವೇದಗಳು ಬ್ರಹ್ಮವನ್ನು 'ಇದಲ್ಲ', 'ಇದಲ್ಲ' ಎಂದು ವರ್ಣಿಸುತ್ತವೆ. ಆದರೆ ಅವನು ಅಥವಾ ಅದು ಇದಲ್ಲದಿದ್ದರೆ, ಅವನು ಅಥವಾ ಅದು ಇದೆ. ನಾವು ಇರುವುದಾದರೆ, ನಮ್ಮ ಜನಕರು ಮತ್ತು ಅವರ ಜನಕರು ಇದ್ದುದಾದರೆ, ಇಡೀ ಸೃಷ್ಟಿಯ ಜನಕನಲ್ಲಿ ನಂಬುವುದು ಯುಕ್ತವಾಗಿರುತ್ತದೆ. ಆದ್ದರಿಂದಲೇ ನಾವೆಲ್ಲರೂ ಏಕಕಂಠದಿಂದ ಒಬ್ಬನೇ ದೇವರನ್ನು ವಿಭಿನ್ನವಾಗಿ ಪರಮಾತ್ಮ, ಈಶ್ವರ, ಶಿವ, ವಿಷ್ಣು, ರಾಮ, ಅಲ್ಲಾ, ಖುದಾ, ದಾದಾ, ಹೋರ್ಮುಜ್ದ, ಜೆಹೋವ, ಗಾಡ್, ಮುಂತಾದ ಅಸಂಖ್ಯ ಬಗೆಯ ಹೆಸರುಗಳಿಂದ ಕರೆಯುತ್ತೇವೆ. ಅವನು ಏಕ ಮತ್ತು ಅನೇಕ. ಅವನ ಗಾತ್ರ ಅಣುವಿಗಿಂತ ಸಣ್ಣದು ಮತ್ತು ಹಿಮಾಲಯಕ್ಕಿಂತ ದೊಡ್ಡದು. ಸಮುದ್ರದ ಒಂದೊಂದು ಹನಿಯಲ್ಲೂ ಅವನು ಅಡಗಿದ್ದಾನೆ. ಆದರೂ ಸಪ್ತಸಮುದ್ರಗಳು ಕೂಡ ಅವನನ್ನು ಒಳಗೊಳ್ಳಲಾರವು. ಅವನನ್ನು ಅರಿಯಲು ತರ್ಕ ಅಶಕ್ತವಾಗಿದೆ. ಅವನು ತರ್ಕದ ನಿಲುಕಿಗೆ ಅಥವಾ ಹಿಡಿತಕ್ಕೆ ಮೀರಿದ್ದಾನೆ. ಆದರೆ ಈ ಅಂಶವನ್ನು ನಾನು ವಿಸ್ತೃತಗೊಳಿಸಬೇಕಾಗಿಲ್ಲ. ಈ ವಿಷಯದಲ್ಲಿ ಮುಖ್ಯವಾದದ್ದು ಶ್ರದ್ಧೆ. ನನ್ನ ತರ್ಕ

ಅಸಂಖ್ಯಾತ ಊಹೆಗಳನ್ನು ಕಲ್ಪಿಸಬಹುದು ಮತ್ತು ಕರಗಿಸಬಹುದು. ನಾಸ್ತಿಕ ನನ್ನನ್ನು ಚರ್ಚೆಯಲ್ಲಿ ಕೆಳಕ್ಕೆ ಕೆಡವಬಲ್ಲ. ಆದರೆ ನನ್ನ ಶ್ರದ್ಧೆ ನನ್ನ ತರ್ಕಕ್ಕಿಂತ ಎಷ್ಟು ವೇಗವಾಗಿ ಓಡುತ್ತದೆಯೆಂದರೆ ನಾನು ಇಡೀ ಪ್ರಪಂಚಕ್ಕೆ ಸವಾಲೆಸೆದು, "ದೇವರು ಇದ್ದಾನೆ, ಇದ್ದನು, ಮತ್ತು ಎಂದೆಂದಿಗೂ ಇರುತ್ತಾನೆ" ಎಂದು ಹೇಳಬಲ್ಲೆ.

ಆದರೆ ದೇವರ ಅಸ್ತಿತ್ವವನ್ನು ನಿರಾಕರಿಸಲು ಇಚ್ಛಿಸುವವರಿಗೆ ಹಾಗೆ ಮಾಡಲು ಸ್ವಾತಂತ್ರ್ಯವಿದೆ. ಅವನು ದಯಾಪರ ಮತ್ತು ಕರುಣಾಮಯಿ. ಅವನ ಪ್ರಭುತ್ವವನ್ನು ನಾವು ಒಪ್ಪಿಕೊಳ್ಳುವಂತೆ ಮಾಡಲು ಸೇನೆಯನ್ನು ಅಪೇಕ್ಷಿಸುವ ಒಬ್ಬ ಭೂಲೋಕದ ದೊರೆಯಲ್ಲ ಅವನು. ಅವನು ನಮಗೆ ಸ್ವಾತಂತ್ರ್ಯ ನೀಡುತ್ತಾನೆ. ಆದರೂ ಅವನ ಕರುಣೆ ಅವನ ಸಂಕಲ್ಪಕ್ಕೆ ವಿಧೇಯತೆಯನ್ನು ವಿಧಿಸುತ್ತದೆ. ಆದರೆ ನಮ್ಮಲ್ಲಿ ಯಾರಾದರು ಅವನ ಇಚ್ಛೆಗೆ ತಲೆ ಬಾಗಿಸಲು ಅಸಡ್ಡೆ ತೋರಿದರೆ, ಅವನು ಹೇಳುತ್ತಾನೆ; 'ಹಾಗೆಯೇ ಆಗಲಿ. ನನ್ನ ಸೂರ್ಯ ನಿನ್ನ ಮೇಲೆ ಬೆಳಗುವುದನ್ನು ಕಡಿಮೆ ಮಾಡದೆ, ಅಷ್ಟೇ ಬೆಳಗುತ್ತಾನೆ. ನನ್ನ ಮೋಡಗಳು ನಿನ್ನ ಮೇಲೆ ಮಳೆ ಸುರಿಸುವುದನ್ನು ಕಡಮೆ ಮಾಡದೆ, ಅಷ್ಟೇ ಸುರಿಸುತ್ತವೆ. ನನ್ನ ಪ್ರಭುತ್ವವನ್ನು ಒಪ್ಪಿಕೊಳ್ಳುವಂತೆ ನಿನ್ನನ್ನು ಬಲಾತ್ಕರಿಸುವ ಅಗತ್ಯ ನನಗಿಲ್ಲ.' ಅಂಥ ಒಬ್ಬ ದೇವರ ಅಸ್ತಿತ್ವವನ್ನು ಅಜ್ಞಾನಿಗಳು ಪ್ರಶ್ನಿಸಲಿ. ಅವನಲ್ಲಿ ನಂಬಿಕೆಯಿರುವ ಲಕ್ಷಾಂತರ ವಿವೇಕಿಗಳಲ್ಲಿ ನಾನು ಒಬ್ಬ. ಅವನಿಗೆ ನಮಸ್ಕಾರ ಮಾಡುವುದರಲ್ಲಿ ಮತ್ತು ಅವನ ಮಹಿಮೆಯನ್ನು ಹಾಡುವುದರಲ್ಲಿ ನನಗೆ ಎಂದಿಗೂ ದಣಿವಿಲ್ಲ.

*ಯಂಗ್ ಇಂಡಿಯಾ*, 21 ಜನವರಿ 1926



# 23

# ದೇವರಿದ್ದಾನೆ

ಸರ್ವವ್ಯಾಪಿಯಾಗಿರುವ ವರ್ಣನೆಗೆ ಮೀರಿದ ಒಂದು ರಹಸ್ಯ ಶಕ್ತಿ ಇದೆ. ಅದನ್ನು ನಾನು ನೋಡದಿದ್ದರೂ ನನಗೆ ಅದರ ಅನುಭವ ಆಗುತ್ತದೆ. ತನ್ನನ್ನು ಅನುಭವಕ್ಕೆ ಒಳಗಾಗಿಸಿಕೊಳ್ಳುವುದು ಈ ಅದೃಶ್ಯಶಕ್ತಿಯೇ. ಆದರೆ ಅದು ಎಲ್ಲಾ ಪ್ರಮಾಣವನ್ನೂ ಮೀರುತ್ತದೆ, ಏಕೆಂದರೆ ನನ್ನ ಇಂದ್ರಿಯಗಳ ಮೂಲಕ ನಾನು ಸಂವೇದಿಸುವ ಎಲ್ಲಕ್ಕಿಂತಲೂ ಅದು ಅಷ್ಟೊಂದು ವಿಸದೃಶವಾಗಿದೆ. ಅದು ಇಂದ್ರಿಯಗಳಿಗೆ ಅತೀತವಾಗಿದೆ. ಆದರೆ ಒಂದು ಮಟ್ಟದ ವರೆಗೆ ದೇವರ ಅಸ್ತಿತ್ವವನ್ನು ತರ್ಕದ ಮೂಲಕ ನಿರಾಕರಿಸಲು ಸಾಧ್ಯವಿಲ್ಲ. ಸಾಮಾನ್ಯ ವ್ಯವಹಾರಗಳಲ್ಲಿ ಕೂಡ ಯಾವನು ಆಳುತ್ತಾನೆ ಅಥವಾ ಏಕೆ ಮತ್ತು ಹೇಗೆ ಅವನು ಆಳುತ್ತಾನೆ ಎಂಬುದನ್ನು ಜನ ಅರಿತಿರುವುದಿಲ್ಲ ಎಂಬುದು ನನಗೆ ಗೊತ್ತು. ಆದರೂ ನಿಶ್ಚಿತವಾಗಿಯೂ ಆಳುವ ಒಂದು ಶಕ್ತಿ ಇದೆ ಎನ್ನುವುದನ್ನು ಅವರು ಅರಿತಿರುತ್ತಾರೆ. ಕಳೆದ ವರ್ಷ ಮೈಸೂರಿನ ನನ್ನ ಪ್ರವಾಸದಲ್ಲಿ ನಾನು ಅನೇಕ ಬಡ ಹಳ್ಳಿಗರನ್ನು ಸಂಧಿಸಿದೆ. ವಿಚಾರಿಸಿದಾಗ ಮೈಸೂರನ್ನು ಯಾರು ಆಳುತ್ತಿದ್ದರೆಂಬುದು ಅವರಿಗೆ ತಿಳಿದಿರಲಿಲ್ಲ ಎನ್ನುವುದು ನನಗೆ ಗೊತ್ತಾಯಿತು. ಯಾವುದೋ ದೇವರು ಅದನ್ನು ಅಳುತ್ತಿದ್ದನೆಂದು ಅವರು ಸುಮ್ಮನೆ ಹೇಳಿದರು. ತಮ್ಮ ರಾಜನ ವಿಷಯವಾಗಿ ಈ ಬಡಜನರ ಜ್ಞಾನ ಇಷ್ಟು ಸೀಮಿತವಾಗಿರುವಾಗ ಅವರ ರಾಜನಿಗೆ ಅವರು ಇರುವುದಕ್ಕಿಂತ ಗಣಿಸಲಾಗದಷ್ಟು ಪಟ್ಟು ದೇವರಿಗಿಂತ ಕೆಳಗಿರುವ ನಾನು ರಾಜಾಧಿರಾಜನಾದ ಭಗವಂತನ ಸಾನ್ನಿಧ್ಯವನ್ನು ಅರಿಯದಿದ್ದಲ್ಲಿ ಆಶ್ಚರ್ಯಪಡಬೇಕಾಗಿಲ್ಲ. ಆದರೂ ಆ ಬಡ ಹಳ್ಳಿಗರು ಮೈಸೂರಿನ ವಿಷಯದಲ್ಲಿ

ಭಾವಿಸಿದ್ದಂತೆ ನಾನು ಜಗತ್ತಿನಲ್ಲಿ ಒಂದು ಕ್ರಮವ್ಯವಸ್ಥೆ ಇದೆ, ಮತ್ತು ಇರುವ ಅಥವಾ ಜೀವಿಸುವ ಪ್ರತಿಯೊಂದು ವಸ್ತುವನ್ನು ಮತ್ತು ಪ್ರತಿಯೊಂದು ಜೀವಿಯನ್ನು ನಿಯಂತ್ರಿಸುವ ಅವ್ಯತ್ಯಸನೀಯವಾದ ಒಂದು ನಿಯಮ ಇದೆ ಎಂದು ಭಾವಿಸುತ್ತೇನೆ. ಅದು ಒಂದು ಕುರುಡು ನಿಯಮವಲ್ಲ, ಏಕೆಂದರೆ ಯಾವುದೇ ಕುರುಡು ನಿಯಮ ಜೀವಂತ ವ್ಯಕ್ತಿಗಳ ವರ್ತನೆಯನ್ನು ನಿಯಂತ್ರಿಸಲಾರದು. ಸರ್ ಜೆ.ಸಿ. ಬೋಸರ ಅದ್ಭುತ ಸಂಶೋಧನೆಗಳ ಫಲವಾಗಿ ಜಡವೂ ಜೀವವೇ ಎಂದು ಇಂದು ಸಾಧಿಸಬಹುದು. ಜೀವನವೆಲ್ಲವನ್ನೂ ನಿಯಂತ್ರಿಸುವ ಆ ನಿಯಮವೇ ದೇವರು. ನಿಯಮ ಮತ್ತು ನಿಯಮನಿಬಂಧಕ ಇಬ್ಬರೂ ಒಬ್ಬನೇ. ನಿಯಮವನ್ನಾಗಲಿ ನಿಯಮನಿಬಂಧಕನನ್ನಾಗಲಿ ನಾನು ನಿರಾಕರಿಸಲಾಗದು, ಏಕೆಂದರೆ ಅದರ ಅಥವಾ ಅವನ ವಿಷಯ ನನಗೆ ತಿಳಿದಿರುವುದು ಅತ್ಯಲ್ಪ. ಭೌಮಿಕ ಶಕ್ತಿಯೊಂದರ ನಿರಾಕರಣೆ ಅಥವಾ ಅಜ್ಞಾನದಿಂದ ನನಗೆ ಯಾವ ಪ್ರಯೋಜನವೂ ಲಭಿಸದಂತೆಯೇ, ದೇವರ ಅಥವಾ ಅವನ ನಿಯಮದ ನಿರಾಕರಣೆ ನನ್ನನ್ನು ಅದರ ಕಾರ್ಯವ್ಯಾಪ್ತಿಯಿಂದ ವಿಮೋಚನೆಗೊಳಿಸುವುದಿಲ್ಲ. ಭೌಮಿಕ ನಿಯಮದ ಅಂಗೀಕಾರವು ಅದರ ಅಡಿ ಬಾಳನ್ನು ಸುಗಮಗೊಳಿಸುವಂತೆಯೇ ದೇವರ ಅಧಿಕಾರವನ್ನು ನಮ್ರತೆಯಿಂದ ಮೌನವಾಗಿ ಅಂಗೀಕರಿಸುವುದು ಜೀವನಯಾತ್ರೆಯನ್ನು ಸುಗಮಗೊಳಿಸುತ್ತದೆ.

ನನ್ನ ಸುತ್ತ ಇರುವ ಎಲ್ಲವೂ ಸದಾ ಬದಲಾಗುತ್ತಾ, ಸದಾ ಅಳಿಯುತ್ತಾ ಇರುವಾಗ ಆ ಎಲ್ಲಾ ಬದಲವಾಣೆಯ ಅಡಿಯಲ್ಲಿ ಬದಲಾಗದ, ಎಲ್ಲವನ್ನೂ ಒಟ್ಟಿಗೆ ಹಿಡಿದಿರುವ, ಸೃಷ್ಟಿಸುವ, ಲಯಗೊಳಿಸುವ ಮತ್ತು ಪುನಃ ಸೃಷ್ಟಿಸುವ ಒಂದು ಜೀವಂತ ಶಕ್ತಿ ಇರುವುದನ್ನು ನಾನು ಮಸುಕುಮಸುಕಾಗಿ ಕಾಣುತ್ತೇನೆ. ಆ ವ್ಯಾಪಕ ಶಕ್ತಿ ಅಥವಾ ಚೈತನ್ಯವೇ ದೇವರು. ಕೇವಲ ಇಂದ್ರಿಯಗಳ ಮೂಲಕ ನಾನು ನೋಡುವ ಬೇರಾವುದೂ ಉಳಿಯಲಾರದೆ ಅಥವಾ ಉಳಿಯದೆ ಇರುವುದರಿಂದ, ಅವನೊಬ್ಬನೇ ಇದ್ದಾನೆ.

ಈ ಶಕ್ತಿ ಒಳ್ಳೆಯದೋ ಕೆಟ್ಟದ್ದೋ? ಅದು ಶುದ್ಧಾಂಗವಾಗಿ ಒಳ್ಳೆಯದು ಎಂದು ನಾನು ಭಾವಿಸುತ್ತೇನೆ. ಏಕೆಂದರೆ ಸಾವಿನ ನಡುವೆ ಜೀವ ಉಳಿದಿರುತ್ತದೆ, ಅಸತ್ಯದ ನಡುವೆ ಸತ್ಯ ಉಳಿದಿರುತ್ತದೆ, ಕತ್ತಲೆಯ ನಡುವೆ ಬೆಳಕು ಉಳಿದಿರುತ್ತದೆ ಎನ್ನುವುದನ್ನು ನಾನು ನೋಡುತ್ತೇನೆ. ಆದ್ದರಿಂದ ದೇವರು ಜೀವ, ಸತ್ಯ, ಬೆಳಕು ಎಂದು ನಾನು ಗ್ರಹಿಸುತ್ತೇನೆ. ದೇವರು ಪ್ರೇಮ. ಅವನು ಪರಮ ಶ್ರೇಯ. ಆದರೆ ಕೇವಲ ಬುದ್ಧಿಯನ್ನಷ್ಟೇ ತೃಪ್ತಿಗೊಳಿಸುವವನು – ಅವನು ಎಂದಾದರೂ ಹಾಗೆ ಮಾಡಿದಲ್ಲಿ – ದೇವರಲ್ಲ. ದೇವರು ದೇವರಾಗಬೇಕಾದಲ್ಲಿ ಹೃದಯವನ್ನು

ಆಳಬೇಕು ಮತ್ತು ಅದನ್ನು ಪರಿವರ್ತಿಸಬೇಕು. ತನ್ನ ಭಕ್ತ ಅತ್ಯಂತ ಸಣ್ಣ ಕ್ರಿಯೆಯಲ್ಲಿಯೂ ಅವನು ತನ್ನನ್ನು ಪ್ರಕಟಿಸಿಕೊಳ್ಳಬೇಕು. ಪಂಚೇಂದ್ರಿಯಗಳು ಉತ್ಪಾದಿಸುವುದಕ್ಕಿಂತಲೂ ಹೆಚ್ಚು ಸತ್ಯವಾದ ಸ್ಪಷ್ಟಜ್ಞಾನದ ಮೂಲಕ ಮಾತ್ರ ಇದನ್ನು ಮಾಡಬಹುದು. ಇಂದ್ರಿಯ ಸಂವೇದನೆಗಳು ನಮಗೆ ಎಷ್ಟೇ ಸತ್ಯವಾಗಿ ಕಂಡುಬಂದರೂ ಅನೇಕವೇಳೆ ಅಸತ್ಯ ಹಾಗೂ ಮೋಸಗೊಳಿಸುವಂಥವು ಆಗಿರಬಹುದು. ಜ್ಞಾನವು ಇಂದ್ರಿಯಗಳಿಗೆ ಅತೀತವಾಗಿ ಆಗಿದ್ದರೆ ಅದು ಅಸ್ಖಲಿತವಾಗುತ್ತದೆ. ಅದು ಬಾಹ್ಯ ಸಾಕ್ಷ್ಯದಿಂದ ಸಮರ್ಥಿತವಾಗದೆ ಒಳಗಡೆ ದೇವರ ನಿಜವಾದ ಸಾನ್ನಿಧ್ಯವನ್ನು ಅನುಭವಿಸಿದವರ ಪರಿವರ್ತಿತ ನಡತೆ ಮತ್ತು ಸ್ವಭಾವಗಳಲ್ಲಿ ರುಜುವಾತು ಪಡೆಯುತ್ತದೆ.

ಇಂಥ ಸಾಕ್ಷ್ಯ ಎಲ್ಲಾ ದೇಶಗಳ ಮತ್ತು ನಾಡುಗಳ ಪ್ರವಾದಿಗಳ ಮತ್ತು ಋಷಿಗಳ ಅವಿಚ್ಛಿನ್ನ ಪರಂಪರೆಯ ಅನುಭವಗಳಲ್ಲಿ ಸಿಗುತ್ತದೆ. ಈ ಸಾಕ್ಷ್ಯವನ್ನು ನಿರಾಕರಿಸುವುದು ನನ್ನನ್ನು ನಿರಾಕರಿಸಿಕೊಂಡಂತೆಯೇ.

ಈ ಜ್ಞಾನಕ್ಕೆ ಪೂರ್ವಭಾವಿಯಾಗಿ ಒಂದು ಅಚಲಶ್ರದ್ಧೆ ಇರುತ್ತದೆ. ದೇವರ ಸಾನ್ನಿಧ್ಯವನ್ನು ಸ್ವಂತವಾಗಿ ಪರೀಕ್ಷಿಸಬೇಕೆನ್ನುವವನು ಒಂದು ಜೀವಂತ ಶ್ರದ್ಧೆಯ ಮೂಲಕ ಅದನ್ನು ಮಾಡಬಹುದು. ಶ್ರದ್ಧೆಯನ್ನೇ ಬಾಹ್ಯ ರುಜುವಾತಿನ ಮೂಲಕ ಸಿದ್ಧಪಡಿಸಲಾಗದ್ದರಿಂದ, ಅತ್ಯಂತ ಸುರಕ್ಷಿತ ಮಾರ್ಗವೆಂದರೆ, ಪ್ರಪಂಚದ ನೈತಿಕ ರಾಜ್ಯಭಾರದಲ್ಲಿ, ಆದ್ದರಿಂದ ನೈತಿಕ ನಿಯಮದಲ್ಲಿ, ಸತ್ಯ ಪ್ರೇಮಗಳ ನಿಯಮದ ಪಾರಮ್ಯದಲ್ಲಿ ನಂಬಿಕೆ ಇಡುವುದು. ಸತ್ಯ ಮತ್ತು ಪ್ರೇಮಗಳಿಗೆ ವಿರುದ್ಧವಾಗಿರುವ ಎಲ್ಲವನ್ನೂ ಕೂಡಲೇ ನಿರಾಕರಿಸುವ ಸ್ಪಷ್ಟ ನಿರ್ಧಾರ ಇರುವ ಕಡೆ, ಶ್ರದ್ಧೆಯ ಅನುಷ್ಠಾನ ಅತ್ಯಂತ ಸುರಕ್ಷಿತವಾಗಿರುತ್ತದೆ.

ಕೇಡಿನ ಅಸ್ತಿತ್ವಕ್ಕೆ ಕಾರಣವನ್ನು ನಾನು ಯಾವುದೇ ತಾರ್ಕಿಕ ವಿಧಾನದ ಮೂಲಕ ನೀಡಲಾರೆ. ಹಾಗೆ ಮಾಡಿದಲ್ಲಿ ದೇವರಿಗೆ ಸರಿಸಮಾನವಾದಂತೆ ಆಗುತ್ತದೆ. ಆದ್ದರಿಂದ ಕೇಡನ್ನು ಕೇಡು ಎಂದು ಮಾತ್ರ ಪರಿಗಣಿಸುವಷ್ಟು ವಿನಮ್ರತೆ ಮಾತ್ರ ನನಗಿದೆ. ಪ್ರಪಂಚದಲ್ಲಿ ಕೇಡಿಗೆ ಅವಕಾಶ ನೀಡಿರುವ ಕಾರಣದಿಂದ ನಾನು ದೇವರನ್ನು ಬಹಳ ತಾಳಿಕೆ ಉಳ್ಳವನು ಮತ್ತು ತಾಳ್ಮೆಯುಳ್ಳವನು ಎಂದು ಕರೆಯುತ್ತೇನೆ. ಅವನಲ್ಲಿ ಕೇಡು ಇಲ್ಲವೆಂಬುದು ನನಗೆ ಗೊತ್ತು. ಅವನು ಕೇಡಿನ ಕರ್ತೃ, ಆದರೂ ಅದರ ಸ್ಪರ್ಶವಿಲ್ಲದವನು.

ಜೀವವನ್ನೇ ತೆರಬೇಕಾಗಿ ಬಂದರೂ ಸರಿ, ಕೇಡಿನ ಸಂಗಡ ಮತ್ತು ವಿರುದ್ಧ ಸೆಣಸದಿದ್ದರೆ ನಾನು ದೇವರನ್ನು ಎಂದಿಗೂ ಕಾಣಲಾರೆ ಎನ್ನುವುದು ನನಗೆ ಗೊತ್ತು. ನನ್ನ ಸಾಮಾನ್ಯ ಹಾಗೂ ಸೀಮಿತ ಅನುಭವದ ಮೂಲಕ ನಾನು

ಈ ಶ್ರದ್ಧೆಯಲ್ಲಿ ಸುಭದ್ರವಾಗಿದ್ದೇನೆ. ಹೆಚ್ಚು ಹೆಚ್ಚು ಪರಿಶುದ್ಧವಾಗಿರಲು ನಾನು ಪ್ರಯತ್ನಿಸಿದಂತೆ ದೇವರಿಗೆ ನಾನು ಹೆಚ್ಚುಹೆಚ್ಚು ಹತ್ತಿರವಾಗುತ್ತಿರುವಂತೆ ನನಗೆ ಭಾಸವಾಗುತ್ತದೆ. ನನ್ನ ಶ್ರದ್ಧೆಯು ಇಂದು ಆಗಿರುವಂತೆ ಕೇವಲ ಸ್ವಸಮರ್ಥನೆಯಾಗದೆ, ಹಿಮಾಲಯದಷ್ಟು ಅಚಲವೂ, ಅದರ ಶಿಖರಗಳ ಮೇಲಿರುವ ಹಿಮದಷ್ಟು ಬಿಳುಪೂ ಪ್ರಕಾಶಮಾನವೂ ಆದರೆ ನಾನು ಇನ್ನೂ ಎಷ್ಟು ಹೆಚ್ಚು ಹಾಗಿರಬಲ್ಲೆ? ಸದ್ಯದಲ್ಲಿ ನಾನು ಈ ಪತ್ರಲೇಖಕನನ್ನು ಅನುಭವದಿಂದ ಹಾಡಿದ ನ್ಯೂಮನನ ಜೊತೆ ಪ್ರಾರ್ಥಿಸುವಂತೆ ಆಹ್ವಾನಿಸುತ್ತೇನೆ:

ಕರುಣಾಳು, ಬಾ, ಬೆಳಕೆ, ಮುಸುಕಿದೀ ಮಬ್ಬಿನಲಿ,
ಕೈ ಹಿಡಿದು ನಡೆಸೆನ್ನನು.
ಇರುಳು ಕತ್ತಲೆಯ ಗವಿ; ಮನೆ ದೂರ; ಕನಿಕರಿಸಿ
ಕೈ ಹಿಡಿದು ನಡಸೆನ್ನನು.
ಹೇಳಿ ನನ್ನಡಿಯಿಡಿಸು; ಬಲು ದೂರ ನೋಟವನು
ಕೇಳೆನೊಡನೆಯೆ – ಸಾಕು ನನಗೊಂದು ಹೆಜ್ಜೆ.*

*ಯಂಗ್ ಇಂಡಿಯಾ*, 11 ಅಕ್ಟೋಬರ್ 1928

* ಈ ಪಂಕ್ತಿಗಳ ಅನುವಾದ ಬಿ. ಎಂ. ಶ್ರೀಯವರದು – ಅನು.



24

# ಯೂರೋಪಿನಿಂದ ಪತ್ರ

[ ಲಂಡನ್ನಿನ ದುಂಡುಮೇಜಿನ ಪರಿಷತ್ತಿನಿಂದ ವಾಪಸು ಬರುವಾಗ ಸ್ವಿಟ್ಜರ್ಲ್ಯಾಂಡಿನ ಒಂದು ಸಭೆಯಲ್ಲಿ ತಮ್ಮನ್ನು ಕೇಳಿದ ಒಂದು ಪ್ರಶ್ನೆಗೆ ಉತ್ತರ ನೀಡುತ್ತಾ ಗಾಂಧೀಜಿ ಹೀಗೆ ಹೇಳಿದರು]

ದೇವರನ್ನು ನಾನು ಏಕೆ ಸತ್ಯ ಎಂದು ಪರಿಗಣಿಸುತ್ತೇನೆಂದು ನೀವು ನನ್ನನ್ನು ಕೇಳಿದ್ದೀರಿ. ಚಿಕ್ಕಂದಿನಲ್ಲಿ ನನಗೆ ಹಿಂದೂ ಧರ್ಮಗ್ರಂಥಗಳಲ್ಲಿ ದೇವರ ಸಹಸ್ರನಾಮಗಳು ಎಂದು ಹೇಳಿರುವುದನ್ನು ಜಪಿಸಲು ಹೇಳಿಕೊಟ್ಟಿದ್ದರು. ಆದರೆ ದೇವರ ಈ ಒಂದು ಸಾವಿರ ಹೆಸರುಗಳು ಖಂಡಿತವಾಗಿಯೂ ಸಂಪೂರ್ಣವಲ್ಲ. ಎಷ್ಟು ಜೀವಿಗಳಿವೆಯೋ ಅಷ್ಟು ಹೆಸರುಗಳಿವೆ ಎಂದು ನಾವು ನಂಬುತ್ತೇವೆ. ಅದು ನಿಜವೆಂದು ನನ್ನ ಭಾವನೆ. ಆದ್ದರಿಂದ ದೇವರು ನಾಮರಹಿತ ಎಂದು ಕೂಡ ನಾವು ಹೇಳುತ್ತೇವೆ. ದೇವರು ಅನೇಕ ರೂಪಗಳನ್ನು ಹೊಂದಿರುವುದರಿಂದ ಅವನನ್ನು ರೂಪರಹಿತನೆಂದೂ ನಾವು ಪರಿಗಣಿಸುತ್ತೇವೆ. ಅವನು ಅನೇಕ ಭಾಷೆಗಳ ಮೂಲಕ ನಮ್ಮೊಡನೆ ಮಾತನಾಡುವುದರಿಂದ ನಾವು ಅವನನ್ನು ವಾಗ್ರಹಿತ ಇತ್ಯಾದಿಯಾಗಿ ಪರಿಗಣಿಸುತ್ತೇವೆ. ಆದ್ದರಿಂದ ನಾನು ಇಸ್ಲಾಮನ್ನು ಅಧ್ಯಯನ ಮಾಡತೊಡಗಿದಾಗ ಇಸ್ಲಾಮಿನಲ್ಲಿ ಕೂಡ ದೇವರಿಗೆ ಅನೇಕ ಹೆಸರುಗಳಿದ್ದವು ಎಂಬುದನ್ನು ಕಂಡೆ. ಪ್ರೇಮವೇ ದೇವರು ಎನ್ನುವವರ ಜೊತೆ, ಪ್ರೇಮವೇ ದೇವರು ಎಂದು ನಾನೂ ಎನ್ನುತ್ತೇನೆ. ಆದರೆ ಪ್ರೇಮ ದೇವರಾಗಿರಬಹುದಾದರೂ ನನ್ನ ಅಂತರಾಳದಲ್ಲಿ ನಾನು ದೇವರು ಸತ್ಯ ಎನ್ನುತ್ತಲಿದ್ದೆ. ಮಾನವನ ನಾಲಿಗೆಗೆ ದೇವರ ಅತ್ಯಂತ ಪೂರ್ಣ ವರ್ಣನೆಯನ್ನು

ಕೊಡುವುದು ಸಾಧ್ಯವಾದಲ್ಲಿ, ನನ್ನ ಮಟ್ಟಿಗೆ ದೇವರು ಸತ್ಯ ಎನ್ನುವ ತೀರ್ಮಾನಕ್ಕೆ ಬಂದಿದ್ದೇನೆ. ಆದರೆ ಎರಡು ವರ್ಷಗಳ ಹಿಂದೆ ನಾನು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಸತ್ಯವೇ ದೇವರು ಎಂದೆ. ಈ ಎರಡು ಹೇಳಿಕೆಗಳ – ಎಂದರೆ ದೇವರು ಸತ್ಯ ಮತ್ತು ಸತ್ಯವೇ ದೇವರು – ನಡುವಣ ಸೂಕ್ಷ್ಮ ವ್ಯತ್ಯಾಸ ನಿಮಗೆ ಗೊತ್ತಾಗುತ್ತದೆ. ಸುಮಾರು ಐವತ್ತು ವರ್ಷಗಳ ಹಿಂದೆ ಪ್ರಾರಂಭವಾದ ಒಂದು ನಿರಂತರ ನಿಷ್ಠುರ ಅನ್ವೇಷಣೆಯ ತರುವಾಯ ನಾನು ಆ ತೀರ್ಮಾನಕ್ಕೆ ಬಂದೆ. ಸತ್ಯಕ್ಕೆ ಅತ್ಯಂತ ಸಮೀಪದ ದಾರಿ ಪ್ರೇಮ ಎನ್ನುವುದನ್ನು ನಾನು ಆಗ ಕಂಡುಕೊಂಡೆ. ಆದರೆ ಕನಿಷ್ಠ ಪಕ್ಷ ಇಂಗ್ಲಿಷ್ ಭಾಷೆಯಲ್ಲಿ ಪ್ರೇಮ ಎನ್ನುವುದಕ್ಕೆ ಅನೇಕ ಅರ್ಥಗಳಿವೆ ಮತ್ತು ಕಾಮ ಎಂಬರ್ಥದಲ್ಲಿ ಮಾನವಪ್ರೇಮ ಕೀಳುಮಟ್ಟಕ್ಕೆ ಒಯ್ಯುವಂಥದ್ದು ಕೂಡ ಆಗಬಹುದೆಂಬುದನ್ನೂ ಅರಿತೆ. ಅಹಿಂಸೆ ಎಂಬರ್ಥದಲ್ಲಿ ಪ್ರೇಮಕ್ಕೆ ಪ್ರಪಂಚದಲ್ಲಿರುವ ಅನುಯಾಯಿಗಳು ಕೇವಲ ಒಂದು ಪರಿಮಿತ ಸಂಖ್ಯೆಯವರು ಎಂಬುದನ್ನೂ ಕಂಡೆ. ಆದರೆ ಸತ್ಯಕ್ಕೆ ಸಂಬಂಧಿಸಿದಂತೆ ನಾನು ದ್ವಂದ್ವಾರ್ಥವನ್ನು ಎಂದಿಗೂ ಕಾಣಲಿಲ್ಲ. ನಾಸ್ತಿಕರು ಕೂಡ ಸತ್ಯದ ಅಗತ್ಯದ ಅಥವಾ ಶಕ್ತಿಯ ಬಗ್ಗೆ ಚಕಾರವೆತ್ತಿರಲಿಲ್ಲ. ಆದರೆ ಸತ್ಯವನ್ನು ಹೊರಗೆಡಹುವ ತಮ್ಮ ಉತ್ಸಾಹ ಭರದಲ್ಲಿ ನಾಸ್ತಿಕರು ದೇವರ ಅಸ್ತಿತ್ವವನ್ನೇ ನಿರಾಕರಿಸಲು ಹಿಂದೆಗೆದಿಲ್ಲ. ಅವರ ದೃಷ್ಟಿಕೋನದಿಂದ ಅದು ಸರಿಯಾಗಿಯೇ ಇದೆ. ಈ ತರ್ಕದ ಕಾರಣದಿಂದಾಗಿಯೇ ನಾನು ದೇವರು ಸತ್ಯ ಎಂದು ಹೇಳುವುದಕ್ಕೆ ಬದಲು ಸತ್ಯವೇ ದೇವರು ಎಂದು ಹೇಳಬೇಕು ಎಂದು ಆಲೋಚಿಸಿದ್ದು. ತಾನು ನಾಸ್ತಿಕನೆಂದು ಹೇಳಿಕೊಳ್ಳಲು ಸಂತೋಷಪಡುತ್ತಿದ್ದ ಚಾರ್ಲ್ಸ್ ಬ್ರಾಡ್‌ಲಾನ ಹೆಸರು ನೆನಪಾಗುತ್ತದೆ. ಆದರೆ ಅವನ ವಿಷಯ ನನಗೆ ಸ್ವಲ್ಪ ತಿಳಿದಿರುವುದರಿಂದ ಅವನನ್ನು ಒಬ್ಬ ನಾಸ್ತಿಕನೆಂದು ನಾನು ಎಂದಿಗೂ ಪರಿಗಣಿಸುವುದಿಲ್ಲ. ನಾನು ಅವನನ್ನು ಒಬ್ಬ ದೈವಭಯವುಳ್ಳ ವ್ಯಕ್ತಿ ಎಂದು – ಅವನು ಆ ಹೆಸರನ್ನು ನಿರಾಕರಿಸುತ್ತಾನೆ ಎನ್ನುವುದು ನನಗೆ ಗೊತ್ತಿದ್ದರೂ – ಕರೆಯುತ್ತೇನೆ. 'ಮಾನ್ಯ ಬ್ರಾಡ್‌ಲಾ, ನೀವೊಬ್ಬ ಸತ್ಯಭೀತಿಯುಳ್ಳ ವ್ಯಕ್ತಿ, ಆದ್ದರಿಂದ ಒಬ್ಬ ದೈವಭೀತಿಯುಳ್ಳ ವ್ಯಕ್ತಿ' ಎಂದು ಹೇಳಿದರೆ ಅವರ ಮುಖ ಕೆಂಪೇರುತ್ತದೆ. ಸತ್ಯವೇ ದೇವರು ಎಂದು ಹೇಳುವ ಮೂಲಕ ನಾನು ಅನೇಕ ಯುವಕರ ಟೀಕೆಗಳನ್ನು ಶಾಂತಗೊಳಿಸಿರುವಂತೆಯೇ ಅವನ ಟೀಕೆಯನ್ನೂ ಕೂಡಲೇ ಶಾಂತಗೊಳಿಸುತ್ತೇನೆ. ಇದರ ಜೊತೆಗೆ ಲಕ್ಷಾಂತರ ಮಂದಿ ದೇವರ ಹೆಸರನ್ನು ಹೇಳುತ್ತಾ, ಅವನ ಹೆಸರಿನಲ್ಲಿ ಅವಾಚ್ಯವಾದ ಘೋರಕೃತ್ಯಗಳನ್ನು ಎಸಗುತ್ತಿರುವ ದೊಡ್ಡ ಕಷ್ಟವನ್ನು ಸೇರಿಸಿ. ಸತ್ಯದ ಹೆಸರಿನಲ್ಲಿ ವಿಜ್ಞಾನಿಗಳು

ಅನೇಕವೇಳೆ ಕ್ರೂರಕೃತ್ಯಗಳನ್ನು ಮಾಡುವುದಿಲ್ಲ ಎಂದೇನಲ್ಲ. ಜನ ಜೀವಂತ ದೇಹಚ್ಛೇದನ ಮಾಡುವಾಗ ಸತ್ಯದ ಹಾಗೂ ವಿಜ್ಞಾನದ ಹೆಸರಿನಲ್ಲಿ ಪ್ರಾಣಿಗಳ ಮೇಲೆ ಹೇಗೆ ಅಮಾನವೀಯ ಕ್ರೂರಕೃತ್ಯಗಳನ್ನು ನಡೆಸಲಾಗುತ್ತದೆ ಎಂಬುದು ನನಗೆ ಗೊತ್ತು. ದೇವರನ್ನು ನೀವು ಹೇಗೇ ವರ್ಣಿಸಿ, ಹಾದಿಯಲ್ಲಿ ಹೀಗೆ ಅನೇಕ ಕಷ್ಟಗಳಿವೆ. ಆದರೆ ಮಾನವ ಬುದ್ಧಿ ಸೀಮಿತವಾದದ್ದು. ಮಾನವನ ಗ್ರಹಣಶಕ್ತಿಗೆ ಅತೀತವಾದ ವ್ಯಕ್ತಿ ಯಾ ವಸ್ತುವೊಂದರ ಬಗ್ಗೆ ಆಲೋಚಿಸುವಾಗ ನೀವು ಅನೇಕ ಪರಿಮಿತಿಗಳಡಿ ಶ್ರಮಿಸಬೇಕಾಗುತ್ತದೆ.

ಮತ್ತೆ, ಹಿಂದೂದರ್ಶನದಲ್ಲಿ ಇನ್ನೊಂದು ವಿಷಯವಿದೆ, ಅಂದರೆ ದೇವರು ಮಾತ್ರವೇ ಇದ್ದಾನೆ ಮತ್ತು ಬೇರಾವುದೂ ಅಸ್ತಿತ್ವದಲ್ಲಿಲ್ಲ. ಇಸ್ಲಾಮಿನ ಕಲ್ಮದಲ್ಲಿಯೂ ಇದೇ ಸತ್ಯವನ್ನು ಒತ್ತಿಹೇಳಿರುವುದನ್ನೂ, ಉದಾಹರಿಸಿರುವುದನ್ನೂ ನೀವು ಕಾಣುತ್ತೀರಿ. ದೇವರು ಮಾತ್ರ ಇದ್ದಾನೆ, ಬೇರಾವುದೂ ಅಸ್ತಿತ್ವದಲ್ಲಿಲ್ಲ ಎಂದು ಸ್ಪಷ್ಟವಾಗಿ ಹೇಳಿರುವುದನ್ನು ನೀವು ಅಲ್ಲಿ ನೋಡುತ್ತೀರಿ. ವಾಸ್ತವವಾಗಿ ಸತ್ಯ ಎಂಬುದಕ್ಕೆ ಸಂಸ್ಕೃತದ ಶಬ್ದ ಅಕ್ಷರಾರ್ಥದಲ್ಲಿ 'ಇರುವ ವಸ್ತು – ಸತ್' ಎಂಬ ಅರ್ಥವುಳ್ಳ ಶಬ್ದ. ಇದು ಮತ್ತು ನಾನು ಕೊಡಬಲ್ಲ ಇತರ ಹಲವು ಕಾರಣಗಳಿಂದಾಗಿ 'ಸತ್ಯವೇ ದೇವರು' ಎಂಬ ಲಕ್ಷಣ ನನಗೆ ಅತ್ಯಂತ ತೃಪ್ತಿಯನ್ನು ನೀಡುತ್ತದೆ ಎಂಬ ತೀರ್ಮಾನಕ್ಕೆ ಬಂದಿದ್ದೇನೆ. ನೀವು ಸತ್ಯವನ್ನು ದೇವರು ಎಂದು ಕಾಣಬಯಸಿದರೆ ಅದಕ್ಕೆ ಏಕಮಾತ್ರ ಅನಿವಾರ್ಯ ಸಾಧನ ಪ್ರೇಮ, ಎಂದರೆ ಅಹಿಂಸೆ ಆತ್ಯಂತಿಕವಾಗಿ ಸಾಧನ ಮತ್ತು ಗುರಿ ಪರ್ಯಾಯಪದಗಳೆಂದು ನಾನು ನಂಬಿರುವುದರಿಂದ, ದೇವರು ಪ್ರೇಮ ಎಂದು ಹೇಳಲು ನಾನು ಹಿಂದೆಗೆಯಕೂಡದು.

'ಹಾಗಾದರೆ ಸತ್ಯ ಎಂದರೇನು?'

ಕಷ್ಟವಾದ ಪ್ರಶ್ನೆ (ಎಂದು ಗಾಂಧೀಜಿ ಹೇಳಿದರು), ಆದರೆ ಒಳದನಿ ನಿಮಗೆ ಏನನ್ನು ಹೇಳುತ್ತದೆಯೋ ಅದು ಎಂದು ಹೇಳುವ ಮೂಲಕ ನನ್ನ ಮಟ್ಟಿಗೆ ನಾನದನ್ನು ಬಗೆಹರಿಸಿಕೊಂಡಿದ್ದೇನೆ. ಹಾಗಾದಲ್ಲಿ ಭಿನ್ನಭಿನ್ನ ಜನ ವಿಭಿನ್ನ ಹಾಗೂ ವಿರುದ್ಧ ಸತ್ಯಗಳ ವಿಷಯವಾಗಿ ಯೋಚಿಸುವುದಾದರೂ ಹೇಗೆ ಎಂದು ನೀವು ಕೇಳುತ್ತೀರಿ. ಮಾನವ ಬುದ್ಧಿ ಅಸಂಖ್ಯಾತ ಮಾಧ್ಯಮಗಳ ಮುಲಕ ಕೆಲಸ ಮಾಡುತ್ತದೆ ಮತ್ತು ಮಾನವಬುದ್ಧಿಯ ವಿಕಾಸ ಎಲ್ಲರಿಗೂ ಒಂದೇ ಆಗಿಲ್ಲ ಎಂಬುದನ್ನು ನೋಡಿದರೆ, ಒಬ್ಬನಿಗೆ ಸತ್ಯವಾದುದು ಇನ್ನೊಬ್ಬನಿಗೆ ಅಸತ್ಯವಾಗಬಹುದು ಎನ್ನುವುದು ಸಿದ್ಧವಾಗುತ್ತದೆ. ಆದ್ದರಿಂದ ಈ ಪ್ರಯೋಗಗಳನ್ನು ನಡೆಸಿರುವವರು ಈ ಪ್ರಯೋಗಗಳನ್ನು ಮಾಡುವಲ್ಲಿ ಕೆಲವು

ನಿಯಮಗಳನ್ನು ಪಾಲಿಸಬೇಕು ಎಂಬ ತೀರ್ಮಾನಕ್ಕೆ ಬಂದಿದ್ದಾರೆ. ವೈಜ್ಞಾನಿಕ ಪ್ರಯೋಗಗಳನ್ನು ನಡೆಸಲು ಅನಿವಾರ್ಯವಾದ ಒಂದು ವೈಜ್ಞಾನಿಕ ಶಿಕ್ಷಣಕ್ರಮ ಇರುವಂತೆಯೇ ಆಧ್ಯಾತ್ಮಿಕ ಕ್ಷೇತ್ರದಲ್ಲಿ ಪ್ರಯೋಗಗಳನ್ನು ನಡೆಸಲು ವ್ಯಕ್ತಿಯೊಬ್ಬನನ್ನು ಅರ್ಹನನ್ನಾಗಿ ಮಾಡಲು ಕಟ್ಟುನಿಟ್ಟಾದ ಪೂರ್ವಭಾವಿ ಶಿಕ್ಷಣ ಅಗತ್ಯವಾಗಿದೆ. ಆದ್ದರಿಂದ ತನ್ನ ಒಳದನಿಯ ಬಗ್ಗೆ ಮಾತನಾಡುವ ಮೊದಲು ಪ್ರತಿಯೊಬ್ಬನೂ ತನ್ನ ಇತಿಮಿತಿಗಳನ್ನು ಅರಿಯಬೇಕು. ಆದ್ದರಿಂದ ಸತ್ಯವನ್ನು ದೇವರೆಂದು ಕಾಣುವ ವೈಯಕ್ತಿಕ ಅನ್ವೇಷಣೆಯನ್ನು ಮಾಡಬಯಸುವವರು ಹಲವು ವ್ರತಗಳನ್ನು ಆಚರಿಸಬೇಕು ಎಂಬ ಅನುಭವಾಶ್ರಿತವಾದ ನಂಬಿಕೆ ನಮ್ಮಲ್ಲಿದೆ. ಉದಾಹರಣೆಗೆ, ಸತ್ಯದ ವ್ರತ, ಬ್ರಹ್ಮಚರ್ಯದ ವ್ರತ – ಏಕೆಂದರೆ ಸತ್ಯ ಮತ್ತು ದೇವರ ಬಗ್ಗೆ ನಿಮ್ಮ ಪ್ರೀತಿಯನ್ನು ನೀವು ಬೇರೆ ಯಾವುದರೊಂದಿಗೇ ಆಗಲಿ ಹಂಚಿಕೊಳ್ಳಲು ಸಾಧ್ಯವಿಲ್ಲ – ಅಹಿಂಸೆಯ ವ್ರತ, ಬಡತನ ಹಾಗೂ ಯಾವುದನ್ನೇ ಹೊಂದಿಲ್ಲದಿರುವ ವ್ರತ. ಈ ಐದು ವ್ರತಗಳನ್ನು ನೀವು ನಿಮ್ಮ ಮೇಲೆ ಹಾಕಿಕೊಳ್ಳದಿದ್ದಲ್ಲಿ ನೀವು ಪ್ರಯೋಗಕ್ಕೆ ತೊಡಗುವಂತೆಯೇ ಇಲ್ಲ. ಇನ್ನೂ ಇತರ ಹಲವು ನಿಯಮಗಳನ್ನು ವಿಧಿಸಲಾಗಿದೆ, ಆದರೆ ನಾನು ಅವೆಲ್ಲವನ್ನೂ ನಿಮಗೆ ತಿಳಿಸಬೇಕಾಗಿಲ್ಲ. ಅಂತಸ್ಸಾಕ್ಷಿಯ ದನಿಯನ್ನು ಕೇಳುವ ಹಕ್ಕನ್ನು ಪ್ರತಿಯೊಬ್ಬನೂ ಹೂಡುವುದು ಯುಕ್ತವಲ್ಲ ಎನ್ನುವುದನ್ನು ಈ ಪ್ರಯೋಗಗಳನ್ನು ಮಾಡಿರುವ ಎಲ್ಲರೂ ಅರಿತಿದ್ದಾರೆ ಎಂದು ಹೇಳಿದರೆ ಸಾಕು. ಸದ್ಯದಲ್ಲಿ ಯಾವುದೇ ಶಿಸ್ತನ್ನು ಪಾಲಿಸದೆ ಪ್ರತಿಯೊಬ್ಬನೂ ಅಂತಸ್ಸಾಕ್ಷಿಯ ಹಕ್ಕನ್ನು ಕೇಳುತ್ತಿರುವುದರಿಂದ ಮತ್ತು ದಿಗ್ಭ್ರಮೆಗೊಂಡ ಜಗತ್ತಿಗೆ ಎಷ್ಟೊಂದು ಅಸತ್ಯವನ್ನು ಬಿತ್ತರಿಸಲಾಗಿದೆಯೆಂದರೆ ನಿಜವಾದ ವಿನಯದಿಂದ ಒಟ್ಟಿನಲ್ಲಿ ನಾನು ನಿಮಗೆ ತಿಳಿಸಬಹುದಾದ ಒಂದು ಅಂಶವೆಂದರೆ ವಿಪುಲವಾದ ನಮ್ರಭಾವ ಇಲ್ಲದ ಯಾವನಿಗೂ ಸತ್ಯದ ದರ್ಶನ ಆಗುವುದಿಲ್ಲ ಎನ್ನುವುದು. ಸತ್ಯಸಾಗರದ ಮೇಲೆ ನೀವು ಈಜಬಯಸಿದರೆ, ನಿಮ್ಮನ್ನು ಸೊನ್ನೆಯ ಸ್ಥಿತಿಗೆ ಇಳಿಸಿಕೊಳ್ಳಬೇಕು. ಈ ಆಕರ್ಷಕ ಪಥದಲ್ಲಿ ನಾನು ಇದಕ್ಕಿಂತ ಮುಂದೆ ಹೋಗಲಾರೆ.

*ಯಂಗ್ ಇಂಡಿಯಾ*, 31 ಡಿಸೆಂಬರ್ 1931



# 25

# ದೇವಸ್ಥಾನಗಳಿಗೆ ಶ್ರದ್ಧಾಸಹಿತರಾಗಿ ಹೋಗಿ

[ತಿರುವಾಂಕೂರು ದೇವಾಲಯಪ್ರವೇಶ ಘೋಷಣೆಯ ಸಮಾರಂಭಕ್ಕೆ ಸಂಬಂಧಿಸಿದಂತೆ ತ್ರಿವೇಂದ್ರಂನಲ್ಲಿ ನೀಡಿದ ಭಾಷಣದಲ್ಲಿ ಗಾಂಧೀಜಿ ಹೀಗೆ ಹೇಳಿದರು]

ನನ್ನ ಯೌವನದ ದಿನಗಳಲ್ಲಿ ನಾನು ನನ್ನ ತಂದೆತಾಯಿಗಳು ನನ್ನಲ್ಲಿ ಮೂಡಿಸಿದ್ದ ಶ್ರದ್ಧಾಭಕ್ತಿಗಳೊಡನೆ ಅನೇಕ ದೇವಸ್ಥಾನಗಳಿಗೆ ಹೋಗಿದ್ದೆ. ಆದರೆ ಈಚಿನ ವರ್ಷಗಳಲ್ಲಿ ನಾನು ದೇವಸ್ಥಾನಗಳಿಗೆ ಹೋಗುತ್ತಿಲ್ಲ. ಅಸ್ಪೃಶ್ಯವಿರೋಧಿ ಕೆಲಸದಲ್ಲಿ ನಾನು ತೊಡಗಿದಾಗಿನಿಂದ, ಅಸ್ಪೃಶ್ಯನೆಂದು ಕರೆಯಲ್ಪಟ್ಟ ಪ್ರತಿಯೊಬ್ಬನಿಗೂ ದೇವಾಲಯಗಳು ಪ್ರವೇಶ ನೀಡದಿದ್ದಲ್ಲಿ, ನಾನು ಅವುಗಳಿಗೆ ಹೋಗುವುದನ್ನು ನಿಲ್ಲಿಸಿದ್ದೇನೆ. ಆದ್ದರಿಂದ ನಾನು ಇಂದು ಬೆಳಿಗ್ಗೆ ದೇವಸ್ಥಾನದಲ್ಲಿ ಕಂಡದ್ದು ಘೋಷಣೆಯ ತರುವಾಯ ದೇವಸ್ಥಾನಕ್ಕೆ ಹೋಗಿದ್ದ ಅಷ್ಟೊಂದು ಜನ ಅವರ್ಣ ಹಿಂದೂಗಳ ಮೇಲೆ ಮೂಡಿದ್ದ ನವನೂತನಭಾವವನ್ನೇ ನನ್ನಲ್ಲಿಯೂ ಮೂಡಿಸಿತು. ಕಲ್ಪನೆಯಲ್ಲಿ ನನ್ನ ಮನಸ್ಸು ಕಲ್ಲು ಮತ್ತು ಲೋಹದ ಮೂಲಕ ದೇವಾಲಯಗಳು ದೇವರ ಸಂದೇಶವನ್ನು ತಿಳಿಸಲು ಪ್ರಾರಂಭಿಸಿದ ಪ್ರಾಗೈತಿಹಾಸಿಕ ಶತಮಾನಗಳಿಗೆ ಹಿಂದಕ್ಕೆ ಹೋಯಿತು. ಪ್ರತಿಯೊಂದು ವಿಗ್ರಹವನ್ನೂ ತನ್ನದೇ ಶುದ್ಧ ಹಿಂದಿಯಲ್ಲಿ ವಿವರಿಸುತ್ತಿದ್ದ ಪೂಜಾರಿಯು ಈ ವಿಗ್ರಹಗಳಲ್ಲಿ ಪ್ರತಿಯೊಂದೂ ದೇವರಾಗಿತ್ತು ಎನ್ನುವುದನ್ನು ನನಗೆ ತಿಳಿಸಲು ಇಚ್ಛಿಸಲಿಲ್ಲ ಎಂಬುದನ್ನು ನಾನು ಬಹಳ ಸ್ಪಷ್ಟವಾಗಿ ಕಂಡುಕೊಂಡೆ. ಆದರೆ ಆ ನಿರ್ದಿಷ್ಟ ವಿವರಣೆಯನ್ನು ನೀಡದೆ ಹೋದರೂ, ಅವನು ಈ ದೇವಾಲಯಗಳು

ಕಣ್ಣಿಗೆ ಕಾಣದ, ಅದೃಶ್ಯನಾದ, ವರ್ಣನೆಗೆ ಸಿಲುಕದ ದೇವರಿಗೂ ಅನಂತಸಾಗರದಲ್ಲಿ ಸೂಕ್ಷ್ಮಾತಿಸೂಕ್ಷ್ಮ ಹನಿಗಳಾದ ನಮಗೂ ಅಷ್ಟು ಸಂಖ್ಯೆಯ ಸೇತುವೆಗಳಾಗಿವೆ ಎಂಬುದನ್ನು ನಾನು ಅರಿತುಕೊಳ್ಳುವಂತೆ ಮಾಡಿದ. ಮಾನವಕುಟುಂಬಕ್ಕೆ ಸೇರಿದ ನಾವೆಲ್ಲರೂ ತತ್ವಶಾಸ್ತ್ರಜ್ಞರಲ್ಲ. ನಾವು ಜಡರಲ್ಲಿ ಅತಿಜಡರು. ಅಗೋಚರ ದೇವರನ್ನು ಧ್ಯಾನ ಮಡುವುದರಲ್ಲಿ ನಮಗೆ ತೃಪ್ತಿಯಿಲ್ಲ. ಏಕೋ ಏನೋ ನಮಗೆ ನಾವು ಮುಟ್ಟಬಹುದಾದ ಯಾವುದೋ ಒಂದು, ನಾವು ನೋಡಬಹುದಾದ ಯವುದೋ ಒಂದು, ನಾವು ಮಂಡಿಯೂರಿ ನಮಸ್ಕರಿಸಬಹುದಾದ ಯಾವುದೋ ಒಂದು ಬೇಕು. ಅದು ಒಂದು ಗ್ರಂಥವೋ, ಒಂದು ಶೂನ್ಯ ಕಲ್ಲುಕಟ್ಟಡವೋ ಅಥವಾ ಅನೇಕ ಮೂರ್ತಿಗಳು ನೆಲೆಸಿರುವ ಒಂದು ಕಲ್ಲುಕಟ್ಟಡವೋ ಆಗಿರುವುದು ಮುಖ್ಯವಲ್ಲ. ಕೆಲವರಿಗೆ ಒಂದು ಗ್ರಂಥ ತೃಪ್ತಿ ಕೊಟ್ಟರೆ, ಇನ್ನು ಕೆಲವರಿಗೆ ಒಂದು ಖಾಲಿ ಕಟ್ಟಡ ತೃಪ್ತಿಕೊಡುತ್ತದೆ, ಮತ್ತು ಈ ಶೂನ್ಯಮಂದಿರಗಳಲ್ಲಿ ಯಾವುದಾದರೂ ಒಂದು ಇರುವುದನ್ನು ನೋಡದಿದ್ದರೆ ಇನ್ನೂ ಹಲವಾರು ಜನರು ತೃಪ್ತರಾಗುವುದಿಲ್ಲ. ಮೂಢನಂಬಿಕೆಗಳ ಸಮೂಹವೊಂದನ್ನು ಅವು ಪ್ರತಿನಿಧಿಸುತ್ತವೆ ಎಂದು ಈ ದೇವಾಲಯಗಳಿಗೆ ಹೋಗಬೇಡಿ ಎಂದು ನಾನು ನಿಮಗೆ ಹೇಳುತ್ತೇನೆ. ಈ ದೇವಾಲಯಗಳಲ್ಲಿ ಶ್ರದ್ಧೆಯಿಟ್ಟು ನೀವು ಅವುಗಳಿಗೆ ಹೋದಲ್ಲಿ, ಪ್ರತಿಸಲ ನೀವು ಅವುಗಳಿಗೆ ಹೊದಾಗಲೂ ಪರಿಶುದ್ಧಿ ಹೊಂದಿ ಮತ್ತುಜೀವಂತ ದೇವರಲ್ಲಿ ಹೆಚ್ಚುಹೆಚ್ಚು ಶ್ರದ್ಧೆ ಪಡೆದು ಹೊರಬರುತ್ತೀರಿ ಎನ್ನುವುದು ನಿಮಗೆ ಅರಿವಾಗುತ್ತದೆ.

*ಹರಿಜನ*, 23 ಜನವರಿ 1937



## 26

# ಗೀತೆಯ ಅರ್ಥ

ಒಬ್ಬ ಸ್ನೇಹಿತ ಈ ಮುಂದಿನ ಪ್ರಶ್ನೆಯನ್ನು ಮುಂದಿಡುತ್ತಾನೆ:

ಗೀತೆಯ ಉಪದೇಶವನ್ನು ಕುರಿತ ವಿವಾದ – ಅದು ಹಿಂಸೆಯೇ ಅಥವಾ ಅಹಿಂಸೆಯೇ ಎನ್ನುವುದು – ಬಹಳ ಕಾಲದವರೆಗೆ ಮುಂದುವರೆಯುವಂತೆ ಕಾಣುತ್ತದೆ. ನಾವು ಗೀತೆಯನ್ನು ಓದಿ ಗ್ರಹಿಸುವ, ಅಥವಾ ಓದಿ ಗ್ರಹಿಸಲಿಚ್ಛಿಸುವ ಅರ್ಥ ಒಂದು ಬಗೆಯದು; ಅದನ್ನು ನಿಷ್ಪಕ್ಷಪಾತವಾಗಿ ಓದುವುದರಿಂದ ಲಭಿಸುವ ಅರ್ಥ ಬೇರೊಂದು ಬಗೆಯದು. ಆದ್ದರಿಂದ ಅಹಿಂಸೆಯನ್ನು ಜೀವನದ ಶಾಶ್ವತ ತತ್ತ್ವವನ್ನಾಗಿ ದೃಢವಾಗಿ ಅಂಗೀಕರಿಸುವವನಿಗೆ ಈ ಪ್ರಶ್ನೆ ಹೆಚ್ಚು ಕಷ್ಟವಾಗಿರುವುದಿಲ್ಲ. ಗೀತೆಯು ಅಹಿಂಸೆಯನ್ನು ಉಪದೇಶಿಸಿದರೆ ಮಾತ್ರ ಅದು ಅವನಿಗೆ ಅಂಗೀಕಾರಾರ್ಹವಾಗುತ್ತದೆ ಎಂದು ಅವನು ಹೇಳುತ್ತಾನೆ. ಗೀತೆಯಂಥ ಒಂದು ಮಹಾಗ್ರಂಥ ಅವನಿಗೆ ಶಾಶ್ವತ ಧಾರ್ಮಿಕ ತತ್ತ್ವವಾದ ಅಹಿಂಸೆಗಿಂತ ಹೆಚ್ಚಿನ ಮಹತ್ತ್ವದ ಯಾವುದನ್ನೂ ಬೋಧಿಸಲಾರದು. ಹಾಗೆ ಮಾಡಿದ್ದಲ್ಲಿ, ಅದು ಅವನಿಗೆ ಪ್ರಮಾದವೆಸಗದ ಮಾರ್ಗದರ್ಶಿಯಾಗದೆ ಹೋಗುತ್ತದೆ. ಆದರೂ ಅದು ಅವನ ಮಹಾಗೌರವಕ್ಕೆ ಅರ್ಹವಾಗಿರುತ್ತದೆ, ಆದರೆ ಅಸ್ಖಲಿತ ಪ್ರಮಾಣಗ್ರಂಥವಾಗುವುದಿಲ್ಲ.

ಮೊದಲನೆಯ ಅಧ್ಯಾಯದಲ್ಲಿ ಅರ್ಜುನನು ಅಹಿಂಸೆಯ ಪ್ರಭಾವಕ್ಕೊಳಗಾಗಿ ಆಯುಧಗಳನ್ನು ಕೆಳಗಿಟ್ಟು, ಕೌರವರ ಕೈಗಳಲ್ಲಿ ಸಾಯಲು ಸಿದ್ಧನಾಗಿರುವುದನ್ನು ನೋಡುತ್ತೇವೆ. ಹಿಂಸೆಯು ಒಳಗೊಳ್ಳುವ ವಿನಾಶದ ಮತ್ತು ಪಾಪದ ದೃಶ್ಯವೊಂದನ್ನು ಕಲ್ಪಿಸಿಕೊಳ್ಳುತ್ತಾನೆ. ಗ್ಲಾನಿಗೊಳಗಾಗಿ ಅವನು ಭಯದಿಂದ

ನಡುಗುತ್ತಾ : 'ನಾವು ಎಂಥ ಪಾಪಕೃತ್ಯಕ್ಕೆ ತೊಡಗಿದ್ದೇವೆ' ಎಂದು ಉದ್ಗರಿಸುತ್ತಾನೆ.

ಶ್ರೀಕೃಷ್ಣನು ಅವನನ್ನು ಆ ಮನಃಸ್ಥಿತಿಯಲ್ಲಿ ಹಿಡಿದು ಹೀಗೆ ಅವನಿಗೆ ಹೇಳುತ್ತಾನೆ : 'ಈ ಉನ್ನತ ವೇದಾಂತ ಸಾಕು. ಯಾರೂ ಕೊಲ್ಲುವುದಿಲ್ಲ, ಕೊಲ್ಲಲ್ಪಡುವುದೂ ಇಲ್ಲ. ಆತ್ಮವು ಅಮರ ಮತ್ತು ದೇಹವು ಅಳಿಯಬೇಕು. ಆದ್ದರಿಂದ ಕರ್ತವ್ಯವಾಗಿ ನಿನಗೆ ಒದಗಿ ಬಂದಿರುವ ಯುದ್ಧವನ್ನು ಮಾಡು. ಜಯಾಪಜಯಗಳು ನಿನಗೆ ಸಂಬಂಧಿಸಿದವಲ್ಲ. ನಿನ್ನ ಕೆಲಸವನ್ನು ನಿರ್ವಹಿಸು.'

ಹನ್ನೊಂದನೆಯ ಅಧ್ಯಾಯದಲ್ಲಿ ಭಗವಂತನು ವಿಶ್ವರೂಪದರ್ಶನವನ್ನು ನೀಡಿ ಹೇಳುತ್ತಾನೆ: 'ನಾನು ಕಾಲ, ಲೋಕಗಳ ನಾಶಕ, ಪುರಾಣಪುರುಷ; ಲೋಕಗಳ ನಾಶದ ಕೆಲಸದಲ್ಲಿ ನಾನಿಲ್ಲಿ ತೊಡಗಿದ್ದೇನೆ. ನನ್ನಿಂದ ಈಗಾಗಲೇ ಹತರಾಗಿರುವವರನ್ನು ಕೊಲ್ಲು. ಶೋಕಕ್ಕೆ ಶರಣಾಗಬೇಡ.'

ದೇವರ ಎದುರಿನಲ್ಲಿ ಹಿಂಸೆ ಮತ್ತು ಅಹಿಂಸೆ ಸಮಾನವಾದವು. ಆದರೆ ಮನುಷ್ಯನಿಗೆ ದೇವರ ಸಂದೇಶವೇನು? 'ಯುದ್ಧ ಮಾಡು, ಏಕೆಂದರೆ ರಣರಂಗದಲ್ಲಿ ನೀನು ಖಂಡಿತವಾಗಿಯೂ ನಿನ್ನ ಶತ್ರುಗಳನ್ನು ಸೋಲಿಸುತ್ತೀಯೆ' ಎನ್ನುವುದೇ? ಗೀತೆಯು ಅಹಿಂಸೆಯನ್ನು ಉಪದೇಶಿಸುವುದಾದರೆ, ಮೊದಲನೆ ಮತ್ತು ಹನ್ನೊಂದನೆ ಅಧ್ಯಾಯಗಳು ಉಳಿದವುಗಳೊಡನೆ ಸಂಗತವಾಗಿಲ್ಲ, ಏನೇ ಆಗಲಿ ಅಹಿಂಸಾ ಸಿದ್ಧಾಂತವನ್ನು ಸಮರ್ಥಿಸುವುದಿಲ್ಲ. ನನ್ನ ಸಂಶಯವನ್ನು ಪರಿಹರಿಸಲು ನೀವು ಸಮಯ ಮಾಡಿಕೊಳ್ಳುತ್ತೀರೆಂದು ಆಶಿಸುತ್ತೇನೆ.

ಹಾಕಿರುವ ಈ ಪ್ರಶ್ನೆ ಸದಾಕಾಲದ್ದು. ಗೀತೆಯನ್ನು ಅಧ್ಯಯನ ಮಾಡಿರುವ ಪ್ರತಿಯೊಬ್ಬನೂ ಇದಕ್ಕೆ ತನ್ನದೇ ಸ್ವಂತ ಪರಿಹಾರವನ್ನು ಕಂಡುಕೊಳ್ಳಬೇಕು. ನನ್ನದನ್ನು ನಾನು ನೀಡಲಿದ್ದರೂ ವ್ಯಕ್ತಿಯೊಬ್ಬನು ಆತ್ಯಂತಿಕವಾಗಿ ಮಾರ್ಗದರ್ಶನ ಪಡೆಯುವುದು ಹೃದಯದಿಂದಲೇ ವಿನಾ ಬುದ್ಧಿಯಿಂದಲ್ಲ ಎನ್ನುವುದು ನನಗೆ ಗೊತ್ತು. ಹೃದಯ ಒಂದು ತೀರ್ಮಾನವನ್ನು ಸ್ವೀಕರಿಸುತ್ತದೆ, ತರುವಾಯ ಬುದ್ಧಿ ಅದಕ್ಕೆ ತರ್ಕವನ್ನು ಕಂಡುಹಿಡಿಯುತ್ತದೆ. ವಾದ ನಂಬಿಕೆಯನ್ನು ಅನುಸರಿಸುತ್ತದೆ. ಮನುಷ್ಯನು ಅನೇಕವೇಳೆ ತಾನು ಮಾಡುವುದನ್ನು ಅಥವಾ ಮಾಡಬೇಕೆಂದಿರುವುದನ್ನು ಬೆಂಬಲಿಸಲು ಕಾರಣಗಳನ್ನು ಕಂಡುಹಿಡಿಯುತ್ತಾನೆ.

ಆದ್ದರಿಂದ ಗೀತೆಯನ್ನು ಕುರಿತ ನನ್ನ ವ್ಯಾಖ್ಯಾನವನ್ನು ಒಪ್ಪಿಕೊಳ್ಳಲು ಸಾಧ್ಯವಾಗದವರ ಸ್ಥಿತಿಯನ್ನು ನಾನು ಅರ್ಥಮಾಡಿಕೊಳ್ಳುತ್ತೇನೆ. ನಾನು ಮಾಡಬೇಕಾದುದೆಲ್ಲ ನಾನು ನನ್ನ ಅರ್ಥವನ್ನು ಹೇಗೆ ತಲುಪಿದೆ ಮತ್ತು ಅದನ್ನು ತಲುಪುವಲ್ಲಿ ನಾನು ಯಾವ ವ್ಯಾಖ್ಯಾನ ಸೂತ್ರಗಳನ್ನು ಅನುಸರಿಸಿದ್ದೇನೆ ಎಂಬುದನ್ನು ಸೂಚಿಸುವುದಷ್ಟೆ. ನಾನು ಗೆಲ್ಲಲಿ ಅಥವಾ ಸೋಲಲಿ, ನನ್ನ ಅರ್ಥದ ಪರವಾಗಿ ಹೋರಾಡುವುದಷ್ಟೇ ನನ್ನ ಉದ್ಯಮ.

ಗೀತೆಯ ಮೊದಲನೆ ಪರಿಚಯ ನನಗೆ ಆದದ್ದು 1889ರಲ್ಲಿ. ಆಗ ನನಗೆ ಸುಮಾರು ಇಪ್ಪತ್ತು ವರ್ಷ. ನನಗೆ ಆಗ ಅಹಿಂಸಾತತ್ವದ ಸುಳಿವು ಕೂಡ ಬಹಳಮಟ್ಟಿಗೆ ಆಗಿರಲಿಲ್ಲ. ಗುಜರಾತಿ ಕವಿ ಶ್ಯಾಮಲಭಟ್ಟನ ಒಂದು ಪಂಕ್ತಿ ಶತ್ರುವನ್ನು ಸಹ ಪ್ರೇಮದಿಂದ ಗೆಲ್ಲುವ ಸೂತ್ರವನ್ನು ನನಗೆ ಬೋಧಿಸಿತ್ತು. ಆ ಬೋಧನೆ ನನ್ನೊಳಕ್ಕೆ ಆಳವಾಗಿ ಹೋಗಿತ್ತು. ಆದರೆ ನಾನು ಅದರಿಂದ ಅಹಿಂಸೆಯ ಶಾಶ್ವತ ತತ್ವವನ್ನು ಊಹೆ ಮಾಡಿರಲಿಲ್ಲ. ಉದಾಹರಣೆಗೆ, ಅದು ಪ್ರಾಣಿಜೀವನವೆಲ್ಲವನ್ನೂ ವ್ಯಾಪಿಸಿರಲಿಲ್ಲ. ಇದಕ್ಕೆ ಮೊದಲು ಭಾರತದಲ್ಲಿ ನಾನು ಮಾಂಸದ ರುಚಿ ನೋಡಿದ್ದೆ. ಹಾವಿನಂಥ ವಿಷಜಂತುಗಳನ್ನು ಕೊಲ್ಲುವುದು ಒಂದು ಕರ್ತವ್ಯವೆಂದು ಭಾವಿಸಿದ್ದೆ. ಅಹಿಂಸೆಯಲ್ಲಿ ನಂಬಿಕೆಯಿರುವವನು ವಿಷಜಂತುಗಳನ್ನು ಕೂಡ ಕೊಲ್ಲಕೂಡದು ಎನ್ನುವುದು ನನ್ನ ಇಂದಿನ ನಿಶ್ಚಯ. ಇಂಗ್ಲಿಷರೊಡನೆ ಹೋರಾಟಕ್ಕೆ ನಮ್ಮನ್ನು ತಯಾರುಮಾಡಿಕೊಳ್ಳಬೇಕೆಂದು ಆ ದಿನಗಳಲ್ಲಿ ನಾನು ನಂಬಿದ್ದೆ. 'ಬ್ರಿಟನ್ ಆಳುವುದರಲ್ಲಿ ಏನಾಶ್ಚರ್ಯ' ಮುಂತಾದ ಗುಜರಾತಿ ಕವಿಯೊಬ್ಬನ ಪ್ರಸಿದ್ಧ ಕುಕವನವನ್ನು ನಾನು ಪದೇಪದೇ ಹೇಳುತ್ತಿದ್ದೆ. ಇಂಗ್ಲಿಷರೊಡನೆ ಹೋರಾಟಕ್ಕೆ ನನ್ನನ್ನು ಅರ್ಹನನ್ನಾಗಿಸಿಕೊಳ್ಳುವ ಮೊದಲ ಹೆಜ್ಜೆ ನಾನು ಮಾಂಸವನ್ನು ತಿನ್ನುವುದಾಗಿತ್ತು. ಇಂಗ್ಲೆಂಡಿಗೆ ತೆರಳುವ ಮುನ್ನ ನನ್ನ ಸ್ಥಿತಿ ಹೀಗಿತ್ತು. ಅಲ್ಲಿ ಮಾಂಸಾಹಾರ ಮುಂತಾದವುಗಳಿಂದ ನಾನು ತಪ್ಪಿಸಿಕೊಂಡದ್ದಕ್ಕೆ ಕಾರಣ ನಾನು ನನ್ನ ತಾಯಿಗೆ ಕೊಟ್ಟಿದ್ದ ಮಾತುಗಳನ್ನು ಸಾಯುವವರೆಗೆ ಪಾಲಿಸಬೇಕೆಂಬ ನನ್ನ ನಿರ್ಧಾರ. ನನ್ನ ಸತ್ಯಪ್ರೇಮ ನನ್ನನ್ನು ಅನೇಕ ಅಪಾಯಗಳಿಂದ ಕಾಪಾಡಿದೆ.

ಈಗ ಇಂಗ್ಲೆಂಡಿನಲ್ಲಿದ್ದಾಗ ಇಬ್ಬರು ಇಂಗ್ಲಿಷ್ ಸ್ನೇಹಿತರ ಸಂಪರ್ಕ ನನ್ನನ್ನು ಗೀತೆಯನ್ನು ಓದುವಂತೆ ಮಾಡಿತು. 'ಓದುವಂತೆ ಮಾಡಿತು' ಎಂದು ನಾನು ಏಕೆ ಹೇಳುತ್ತೇನೆಂದರೆ ನಾನು ಅದನ್ನು ಓದಿದ್ದು ನನ್ನ ಸ್ವಂತ ಅಪೇಕ್ಷೆಯಿಂದಲ್ಲ. ಆದರೆ ಈ ಇಬ್ಬರು ಸ್ನೇಹಿತರು ತಮ್ಮ ಜೊತೆ ಗೀತೆಯನ್ನು ಓದುವಂತೆ ನನ್ನನ್ನು ಕೇಳಿದಾಗ, ನನ್ನ ಅಜ್ಞಾನದ ಬಗ್ಗೆ ನನಗೆ ನಾಚಿಕೆಯಾಯಿತು. ನನ್ನ ಧರ್ಮಗ್ರಂಥಗಳ ಬಗ್ಗೆ ನನ್ನ ಸಂಪೂರ್ಣ ಅಜ್ಞಾನದ ಅರಿವು ನನ್ನನ್ನು ನೋಯಿಸಿತು. ಈ ಭಾವದ ಅಡಿಯಲ್ಲಿದ್ದುದು ಸ್ವಾಭಿಮಾನ ಎಂದು ನನ್ನ ಭಾವನೆ. ಗೀತೆಯ ಎಲ್ಲಾ ಶ್ಲೋಕಗಳನ್ನೂ ಇತರರ ಸಹಾಯವಿಲ್ಲದೆ ಅರ್ಥಮಾಡಿಕೊಳ್ಳಲು ನನ್ನ ಸಂಸ್ಕೃತ ಜ್ಞಾನ ಸಾಕಾಗಿರಲಿಲ್ಲ. ಸ್ನೇಹಿತರಿಗೂ ಸಂಸ್ಕೃತ ಸ್ವಲ್ಪವೂ ಗೊತ್ತಿರಲಿಲ್ಲ. ಅವರು ಸರ್ ಎಡ್ವಿನ್ ಆರ್ನಾಲ್ಡರು ಮಾಡಿದ್ದ ಗೀತೆಯ ಅದ್ಭುತ ಅನುವಾದವನ್ನು ನನ್ನ ಮುಂದಿಟ್ಟರು. ನಾನು ಅದರಲ್ಲಿನ

ವಿಷಯಗಳನ್ನು ಆದ್ಯಂತವಾಗಿ ಕಬಳಿಸಿದೆ ಮತ್ತು ಅದರ ಮೋಡಿಗೆ ಸಿಲುಕಿದೆ. ಅಲ್ಲಿಂದೀಚೆಗೆ ಅದರ ಎರಡನೆ ಅಧ್ಯಾಯದ ಕೊನೆಯ ಹತ್ತೊಂಬತ್ತು ಶ್ಲೋಕಗಳು ನನ್ನ ಹೃದಯಫಲಕದ ಮೇಲೆ ಕೊರೆಯಲಾಗಿವೆ. ಅವು ನನಗೆ ಇಡೀ ಜ್ಞಾನರಾಶಿಯನ್ನು ಒಳಗೊಂಡಿವೆ. ಅವು ಬೋಧಿಸುವ ಸತ್ಯಗಳು 'ಶಾಶ್ವತಸತ್ಯಗಳು'. ಅವುಗಳಲ್ಲಿ ತರ್ಕವಿದೆ, ಆದರೆ ಸಾಕ್ಷಾತ್ಕರಿಸಿಕೊಂಡ ಜ್ಞಾನವನ್ನು ಅವು ಪ್ರತಿನಿಧಿಸುತ್ತವೆ.

ಅಲ್ಲಿಂದೀಚೆಗೆ ನಾನು ಅನೇಕ ಅನುವಾದಗಳನ್ನು ಮತ್ತು ಅನೇಕ ವ್ಯಾಖ್ಯಾನಗಳನ್ನು ಓದಿದ್ದೇನೆ, ನನ್ನ ಹೃದಯಕ್ಕೆ ತೃಪ್ತಿಯಾಗುವಷ್ಟು ವಾದಿಸಿದ್ದೇನೆ ಮತ್ತು ತರ್ಕಮಾಡಿದ್ದೇನೆ. ಆದರೆ ಅದರ ಮೊದಲನೆ ಪಠನ ನನಗೆ ನೀಡಿದ ಭಾವನೆ ಎಂದಿಗೂ ಅಳಿಯಲಿಲ್ಲ. ಆ ಶ್ಲೋಕಗಳು ಗೀತೆಯ ವ್ಯಾಖ್ಯಾನಕ್ಕೆ ಕೀಲಿಕೈ. ಅವುಗಳಿಗೆ ವಿರುದ್ಧವಾಗಿರುವಂತೆ ತೋರುವ ಶ್ಲೋಕಗಳನ್ನು ತ್ಯಜಿಸಬೇಕೆಂದು ಕೂಡ ನಾನು ಸಲಹೆ ಮಾಡುತ್ತೇನೆ. ಆದರೆ ನಮ್ರ ವ್ಯಾಸಂಗಿ ಯಾವುದನ್ನೂ ತ್ಯಜಿಸಬೇಕಾಗಿಲ್ಲ. ಅವನು ಸುಮ್ಮನೆ ಇಷ್ಟು ಮಾತ್ರ ಹೇಳುತ್ತಾನೆ: 'ಈ ಅಸಾಮಂಜಸ್ಯವನ್ನು ನಾನು ಪರಿಹರಿಸಲಾಗದುದಕ್ಕೆ ಕಾರಣ ನನ್ನ ಬುದ್ಧಿಯ ಪರಿಮಿತಿ. ಮುಂದಿನ ಕಾಲದಲ್ಲಿ ನಾನದನ್ನು ಮಾಡುವಂತಾಗಬಹುದು.' ತನ್ನೊಂದಿಗೆ ಮತ್ತು ಇತರರೊಂದಿಗೆ ಅವನು ವಾದಿಸುವುದು ಈ ರೀತಿಯಲ್ಲಿ.

ಧರ್ಮಗ್ರಂಥಗಳ ಸರಿಯಾದ ವ್ಯಾಖ್ಯಾನಕ್ಕೆ ಭಕ್ತಿಪೂರ್ವಕವಾದ ಅಧ್ಯಯನ ಮತ್ತು ಅನುಭವ ಅತ್ಯಾವಶ್ಯಕ. ಶೂದ್ರನು ಧರ್ಮಗ್ರಂಥಗಳನ್ನು ಓದಬಾರದು ಎಂಬ ವಿಧಿ ಸಂಪೂರ್ಣವಾಗಿ ಅರ್ಥರಹಿತವಾಗಿಲ್ಲ. ಶೂದ್ರ ಎಂದರೆ ಆಧ್ಯಾತ್ಮಿಕ ಸಂಸ್ಕಾರವಿಲ್ಲದ ಮೂಢ ವ್ಯಕ್ತಿ. ಅವನು ವೇದಗಳು ಮತ್ತು ಇತರ ಧರ್ಮಗ್ರಂಥಗಳ ಅಪವ್ಯಾಖ್ಯಾನ ಮಾಡುವುದು ಅಸಂಭವವೇನಲ್ಲ. ಬೀಜಗಣಿತದ ಸಮೀಕರಣವನ್ನು ಎಲ್ಲರೂ ಬಿಡಿಸಲಾಗುವುದಿಲ್ಲ. ಸ್ವಲ್ಪಮಟ್ಟಿನ ಪೂರ್ವಭಾವಿ ಅಧ್ಯಯನ ಅದಕ್ಕೆ ಅನಿವಾರ್ಯ. ಪಾಪದಲ್ಲಿ ಮುಳುಗಿರುವ ಮನುಷ್ಯನೊಬ್ಬನ ಬಾಯಲ್ಲಿ 'ನಾನು ಬ್ರಹ್ಮ' ಎಂಬ ಮಹಾಸತ್ಯ ಎಷ್ಟು ಅಯೋಗ್ಯವಾಗಿರುತ್ತದೆ! ಅವನು ಅದನ್ನು ಎಷ್ಟು ಹೀನ ಉದ್ದೇಶಗಳಿಗೆ ಬಳಸಬಲ್ಲ! ಅವನ ಕೈಗಳಲ್ಲಿ ಅದು ಎಂಥ ವಿಕಾರಕ್ಕೆ ಒಳಗಾಗಬಲ್ಲದು!

ಆದ್ದರಿಂದ ಧರ್ಮಗ್ರಂಥಗಳನ್ನು ವ್ಯಾಖ್ಯಾನ ಮಾಡಬೇಕೆಂದಿರುವ ವ್ಯಕ್ತಿ ಆಧ್ಯಾತ್ಮಿಕ ಶಿಸ್ತನ್ನು ಪಡೆದಿರಬೇಕು. ಆಚಾರದ ಚಿರಂತನ ಮಾರ್ಗದರ್ಶಕಗಳಾದ ಯಮಗಳನ್ನು ಮತ್ತು ನಿಯಮಗಳನ್ನು ಅವನು ಅಭ್ಯಾಸ ಮಾಡಬೇಕು. ಅವುಗಳ ಮೇಲುಮೇಲಿನ ಅಭ್ಯಾಸದಿಂದ ಪ್ರಯೋಜನವಿಲ್ಲ. ಶಸ್ತ್ರಗಳು ಗುರುವೊಬ್ಬನ

ಆವಶ್ಯಕತೆಯನ್ನು ವಿಧಿಸಿವೆ. ಆದರೆ ಈ ದಿನಗಳಲ್ಲಿ ಗುರು ಅಪರೂಪವಾಗಿರುವುದರಿಂದ, ಋಷಿಗಳು ಭಕ್ತಿಯನ್ನು ಬೋಧಿಸುವ ಆಧುನಿಕ ಗ್ರಂಥಗಳ ಅಧ್ಯಯನವನ್ನು ಸೂಚಿಸಿದ್ದಾರೆ. ಭಕ್ತಿಯಿಲ್ಲದ, ಶ್ರದ್ಧೆಯಿಲ್ಲದ ಜನ ದರ್ಮಗ್ರಂಥಗಳ ವ್ಯಾಖ್ಯನ ಮಾಡಲು ಅನರ್ಹರು. ಪಂಡಿತರು ಅವುಗಳಿಂದ ಸುದೀರ್ಘ ಪಾಂಡಿತ್ಯದ ವ್ಯಾಖ್ಯಾನವೊಂದನ್ನು ಸೆಳೆಯಬಹುದು, ಆದರೆ ಅದು ನಿಜವಾದ ವ್ಯಾಖ್ಯಾನವಾಗುವುದಿಲ್ಲ. ಅನುಭವ ಪಡೆದವರು ಮಾತ್ರವೇ ಧರ್ಮಗ್ರಂಥಗಳ ನಿಜವಾದ ಅರ್ಥವನ್ನು ಗ್ರಹಿಸುತ್ತಾರೆ.

ಆದರೆ ಅನುಭವರಹಿತರಿಗೂ ಕೆಲವು ಸೂತ್ರಗಳಿವೆ. ಸತ್ಯಕ್ಕೆ ವಿರುದ್ಧವಾದ ವ್ಯಾಖ್ಯಾನ ಸರಿಯಾದುದಲ್ಲ. ಸತ್ಯದ ವಿಷಯದಲ್ಲಿಯೂ ಸಂಶಯಪಡುವವನಿಗೆ ಧರ್ಮಗ್ರಂಥಗಳು ಯಾವುದೇ ಅರ್ಥ ಹೊಂದಿರುವುದಿಲ್ಲ. ಅವನ ಜೊತೆ ಯಾರೂ ವಾದಮಾಡಲಾರರು. ಧರ್ಮಗ್ರಂಥಗಳಲ್ಲಿ ಅಹಿಂಸೆಯನ್ನು ಕಾಣಲು ವಿಫಲನಾದ ವ್ಯಕ್ತಿಗೆ ಅಪಾಯ ಕಾದಿದೆ, ಆದರೆ ಅವನು ದುರ್ಗತಿಗೆ ಗುರಿಯಾಗುವುದಿಲ್ಲ. ಸತ್ಯ – ಸತ್ – ಭಾವಾತ್ಮಕವಾಗಿದೆ; ಅಹಿಂಸೆ ಅಭಾವಾತ್ಮಕವಾಗಿದೆ. ಸತ್ಯ ವಸ್ತುಸ್ಥಿತಿಯನ್ನು ಸಂಕೇತಿಸುತ್ತದೆ; ಅಹಿಂಸೆ ವಸ್ತುಸ್ಥಿತಿಯನ್ನು ನಿರಾಕರಿಸುತ್ತದೆ. ಆದರೂ ಅಹಿಂಸೆ ಪರಮಧರ್ಮ. ಸತ್ಯ ಸ್ವಪ್ರಕಾಶವಾದುದು; ಅಹಿಂಸೆ ಅದರ ಅತ್ಯಂತ ಪಕ್ವ ಫಲ. ಅದು ಸತ್ಯದಲ್ಲಿ ಅಂತರ್ಗತವಾಗಿದೆ, ಆದರೆ ಅದು ಸ್ವಪ್ರಕಟಿತವಾಗದಿರುವುದರಿಂದ ವ್ಯಕ್ತಿಯೊಬ್ಬ ಅದನ್ನು ಒಪ್ಪಿಕೊಳ್ಳದೆ ಶಾಸ್ತ್ರಗಳನ್ನು ವ್ಯಾಖ್ಯಾನಿಸಲು ತೊಡಗಬಹುದು. ಆದರೆ ಅವನು ಸತ್ಯವನ್ನು ಅಂಗೀಕರಿಸಿದರೆ ಅದು ಅವನನ್ನು ಅಹಿಂಸೆಯ ಅಂಗೀಕಾರಕ್ಕೆ ಒಯ್ಯುವುದು ಖಂಡಿತ.

ಸತ್ಯದ ಸಾಕ್ಷಾತ್ಕಾರಕ್ಕೆ ದೈಹಿಕಭೋಗಗಳ ತ್ಯಾಗ ಆವಶ್ಯಕ. ಸತ್ಯವನ್ನು ಸಾಕ್ಷಾತ್ಕರಿಸಿಕೊಂಡ ಋಷಿಯು ತನ್ನ ಸುತ್ತಲೂ ಧಗಧಗಿಸುತ್ತಿದ್ದ ಹಿಂಸೆಯ ನಡುವೆ ಅಹಿಂಸೆಯನ್ನು ಕಂಡುಕೊಂಡು ಹೇಳಿದ : 'ಹಿಂಸೆ ಅಸತ್ಯ, ಅಹಿಂಸೆ ಸತ್ಯ.' ಅಹಿಂಸೆಯಿಲ್ಲದೆ ಸತ್ಯವನ್ನು ಸಾಕ್ಷಾತ್ಕರಿಸಿಕೊಳ್ಳುವುದು ಅಸಾಧ್ಯ. ಬ್ರಹ್ಮಚರ್ಯ, ಅಸ್ತೇಯ, ಅಪರಿಗ್ರಹ ಇವು ಅಹಿಂಸೆಯನ್ನು ಸಾಧಿಸುವ ಸಾಧನಗಳು. ಅಹಿಂಸೆ ಸತ್ಯದ ಆತ್ಮ. ಅದಿಲ್ಲದ ಮನುಷ್ಯ ಕೇವಲ ಒಂದು ಮೃಗ. ಸತ್ಯಾನ್ವೇಷಕ ತನ್ನ ಸತ್ಯಾನ್ವೇಷಣೆಯಲ್ಲಿ ಇದೆಲ್ಲವನ್ನೂ ಅರಿಯುತ್ತಾನೆ. ಅನಂತರ ಶಾಸ್ತ್ರಗಳ ವ್ಯಾಖ್ಯಾನದಲ್ಲಿ ಅವನಿಗೆ ಯಾವ ಕಷ್ಟವೂ ಇರುವುದಿಲ್ಲ.

ವ್ಯಾಖ್ಯಾನದ ಇನ್ನೊಂದು ಸೂತ್ರ ಕೇವಲ ಅಕ್ಷರವನ್ನು ಓದದೆ ಭಾವವನ್ನು ಪರೀಕ್ಷಿಸುವುದು. ತುಲಸಿದಾಸರ ರಾಮಾಯಣ ಒಂದು ಗಮನಾರ್ಹ ಗ್ರಂಥ,

ಏಕೆಂದರೆ ಅದು ಪರಿಶುದ್ಧತೆ, ಕರುಣೆ ಮತ್ತು ಭಕ್ತಿಗಳ ಭಾವದಿಂದ ವ್ಯಾಪ್ತವಾಗಿದೆ. ಅದರಲ್ಲೊಂದು ಪಂಕ್ತಿಯಿದೆ. ಅದು ಮದ್ದಳೆ, ಶೂದ್ರರು, ದಡ್ಡರು ಮತ್ತು ಹೆಂಗಸರು ಇವರನ್ನು ಹೊಡೆಯಲು ಅರ್ಹರೆಂದು ಒಟ್ಟುಗೂಡಿಸುತ್ತದೆ. ತನ್ನ ಹೆಂಡತಿಯನ್ನು ಹೊಡೆಯಲು ಈ ಪಂಕ್ತಿಯನ್ನು ಉಲ್ಲೇಖಿಸುವವನು ನರಕಕ್ಕೆ ಭಾಗಿಯಾಗುತ್ತಾನೆ. ರಾಮನು ತನ್ನ ಹೆಂಡತಿಯನ್ನು ಹೊಡೆಯಲಿಲ್ಲ ಎಂದಷ್ಟೇ ಅಲ್ಲ, ಅವಳಿಗೆ ಅಪ್ರಿಯವಾದುದನ್ನು ಮಾಡಲು ಕೂಡ ಎಂದೂ ಪ್ರಯತ್ನಿಸಲಿಲ್ಲ. ತಮ್ಮ ಕಾಲದಲ್ಲಿ ಪ್ರಚಲಿತವಾಗಿದ್ದ ಗಾದೆಯೊಂದನ್ನು ತುಲಸಿದಾಸರು ಸುಮ್ಮನೆ ತಮ್ಮ ಕಾವ್ಯದಲ್ಲಿ ಸೇರಿಸಿದರು. ತಮ್ಮ ಹೆಂಡತಿಯರನ್ನು ಹೊಡೆಯುವುದನ್ನು ಈ ಪಂಕ್ತಿಯ ಆಧಾರದ ಮೇಲೆ ಸಮರ್ಥಿಸುವ ಕ್ರೂರಿಗಳು ಹುಟ್ಟುತ್ತಾರೆಂಬುದನ್ನು ಅವರು ಕನಸಿನಲ್ಲಿಯೂ ಕಂಡಿರಲಿಲ್ಲ. ಆದರೆ ತುಲಸಿದಾಸರು ತಮ್ಮ ಕಾಲದಲ್ಲಿ ಪ್ರಚಲಿತವಾಗಿದ್ದ ಪದ್ಧತಿಯೊಂದನ್ನು ಸ್ವತಃ ಅನುಸರಿಸುತ್ತಿದ್ದರು ಮತ್ತು ತಮ್ಮ ಹೆಂಡತಿಯನ್ನು ಹೊಡೆಯುತ್ತಿದ್ದರು ಎಂದು ಇಟ್ಟುಕೊಂಡರೂ, ಆಗ ತಾನೇ ಏನು? ಹೊಡೆಯುವುದು ಆಗಲೂ ತಪ್ಪಾಗಿರುತ್ತಿತ್ತು. ಆದರೆ ರಾಮಾಯಣವನ್ನು ಬರೆದದ್ದು ಗಂಡಂದಿರು ಹೆಂಡತಿಯರನ್ನು ಹೊಡೆಯುವುದನ್ನು ಸಮರ್ಥಿಸುವುದಕ್ಕಲ್ಲ. ಅದನ್ನು ಬರೆದದ್ದು ಪರಿಪೂರ್ಣಮಾನವನಾದ ರಾಮನನ್ನು, ಆದರ್ಶಸತಿಯಾದ ಸೀತೆಯನ್ನು ಮತ್ತು ನಿಷ್ಠಾವಂತ ಸೋದರನೊಬ್ಬನ ಆದರ್ಶವಾದ ಭರತನನ್ನು ಚಿತ್ರಿಸುವುದಕ್ಕಾಗಿ. ಆದ್ದರಿಂದ ಪ್ರಾಸಂಗಿಕವಾಗಿ ಅದರಲ್ಲಿ ಕಂಡುಬರುವ ದುಷ್ಟಪದ್ಧತಿಗಳ ಸಮರ್ಥನೆಯನ್ನು ನಿರಾಕರಿಸಬೇಕು. ತುಲಸಿದಾಸರು ಭೂಗೋಲಶಾಸ್ತ್ರವನ್ನು ಬೋಧಿಸಲು ತಮ್ಮ ಅಮೂಲ್ಯಕೃತಿಯನ್ನು ಬರೆಯಲಿಲ್ಲ. ರಾಮಾಯಣದಲ್ಲಿ ನಮಗೆ ಕಾಣಸಿಗುವ ಯಾವುದೇ ತಪ್ಪು ಭೂವಿವರಣೆಯನ್ನು ಕೂಡಲೇ ತ್ಯಜಿಸಬೇಕು.

ಈ ಅಭಿಪ್ರಾಯಗಳ ಬೆಳಕಿನಲ್ಲಿ ಗೀತೆಯನ್ನು ಪರಿಶೀಲಿಸೋಣ. ಆತ್ಮಸಾಕ್ಷಾತ್ಕಾರ ಮತ್ತು ಅದರ ಸಾಧನ ಗೀತೆಯ ವಸ್ತು. ಎರಡು ಸೈನ್ಯಗಳ ನಡುವಣ ಯುದ್ಧ ಈ ವಸ್ತುವನ್ನು ನಿರೂಪಿಸಲು ಒಂದು ಸಂದರ್ಭ ಮಾತ್ರ. ಕವಿಯು ಸ್ವತಃ ಯುದ್ಧಕ್ಕೆ ಅಥವಾ ಹಿಂಸೆಗೆ ವಿರೋಧಿಯಾಗಿರಲಿಲ್ಲ, ಆದ್ದರಿಂದ ಯುದ್ಧದ ಪ್ರಸಂಗವನ್ನು ತನ್ನ ಪ್ರಯೋಜನಕ್ಕಾಗಿ ಬಳಸಿಕೊಳ್ಳಲು ಅವನು ಹಿಂದೆಗೆಯಲಿಲ್ಲ ಎಂದು ನೀವು ಬೇಕಾದರೆ ಹೇಳಬಹುದು. ಆದರೆ ಮಹಾಭಾರತದ ಪಠನ ನನಗೆ ಸಂಪೂರ್ಣವಾಗಿ ಬೇರೆಯಾದ ಅಭಿಪ್ರಾಯವನ್ನು ನೀಡಿದೆ. ಅದ್ಭುತ ಸೌಂದರ್ಯದಿಂದ ಕೂಡಿದ ಆ ಮಹಾಕಾವ್ಯದ ಮೂಲಕ ವ್ಯಾಸಕವಿಯು ಯುದ್ಧದ ವೈಫಲ್ಯವನ್ನು ಪ್ರದರ್ಶಿಸಿದ್ದಾನೆ. ಕೌರವರು ಸೋತಿದ್ದರೆ

ಆದರಿಂದೇನಾಯಿತು ಎಂದು ಅವನು ಕೇಳುತ್ತಾನೆ. ಪಾಂಡವರು ಗೆದ್ದದ್ದರಿಂದ ಏನು? ವಿಜಯಿಗಳಲ್ಲಿ ಎಷ್ಟು ಜನ ಉಳಿದರು ಮತ್ತು ಅವರ ಗತಿ ಏನಾಯಿತು? ಕುಂತಿತಾಯಿಗೆ ಎಂಥ ಅಂತ್ಯ ಬಂದಿತು? ಯಾದವರು ಇಂದು ಎಲ್ಲಿ?

ಯುದ್ಧದ ವರ್ಣನೆ ಮತ್ತು ಹಿಂಸೆಯ ಸಮರ್ಥನೆ ಮಹಾಕಾವ್ಯದ ಕಥಾವಸ್ತುವಾಗದಿರುವಾಗ, ಈ ಅಂಶಗಳನ್ನು ಒತ್ತಿಹೇಳುವುದು ಶುದ್ಧ ತಪ್ಪು. ಕೆಲವು ಶ್ಲೋಕಗಳನ್ನು ಅಹಿಂಸೆಯ ಬೋಧನೆಯೊಂದಿಗೆ ಸಮನ್ವಯಗೊಳಿಸುವುದು ಕಷ್ಟವಾದರೆ, ಇಡೀ ಗೀತೆಯನ್ನು ಹಿಂಸೆಯ ಚೌಕಟ್ಟಿನಲ್ಲಿ ಇಡುವುದು ಇನ್ನೂ ಹೆಚ್ಚಿನ ಕಷ್ಟ.

ಕವಿ ಬರೆಯುವಾಗ ತನ್ನ ಕೃತಿಗೆ ಸಾಧ್ಯವಿರುವ ಎಲ್ಲಾ ಅರ್ಥಗಳನ್ನೂ ಅರಿತಿರುವುದಿಲ್ಲ. ಕಾವ್ಯದ ಸ್ವಾರಸ್ಯವೆಂದರೆ ಸೃಷ್ಟಿ ಕವಿಯನ್ನು ಮೀರುತ್ತದೆ. ತನ್ನ ಕಲ್ಪನೆಯ ಉನ್ನತೋನ್ನತ ಹಾರಾಟಗಳಲ್ಲಿ ಅವನು ತಲುಪುವ ಸತ್ಯ ಅನೇಕವೇಳೆ ಅವನ ಬದುಕಿನಲ್ಲೇ ಸಿಕ್ಕಿರುವುದಿಲ್ಲ. ಹೀಗೆ ಅನೇಕ ಕವಿಗಳ ಜೀವನಚರಿತ್ರೆ ಅವರ ಕಾವ್ಯವನ್ನು ಹುಸಿಯಾಗಿಸುತ್ತದೆ. ಗೀತೆಯ ಕೇಂದ್ರ ಉಪದೇಶ ಹಿಂಸೆಯಲ್ಲ, ಅಹಿಂಸೆ ಎನ್ನುವುದನ್ನು ಎರಡನೆಯ ಅಧ್ಯಾಯದಲ್ಲಿ ಪ್ರಾರಂಭಿಸಿ ಕೊನೆಯ ಹದಿನೆಂಟನೆಯ ಅಧ್ಯಾಯದಲ್ಲಿ ಸಂಗ್ರಹಮಾಡಿ ಸಾರಾಂಶ ತಿಳಿಸಿದ ವಸ್ತುವಿನಿಂದ ವಿಸ್ತಾರವಾಗಿ ತೋರಿಸಲಾಗಿದೆ. ಉಳಿದ ಅಧ್ಯಾಯಗಳಲ್ಲಿ ಪ್ರತಿಪಾದಿಸಿರುವುದು ಕೂಡ ಈ ನಿಲುವನ್ನು ಸಮರ್ಥಿಸುತ್ತದೆ. ಕೋಪ, ಆಸಕ್ತಿ, ದ್ವೇಷಗಳಿಲ್ಲದಿದ್ದರೆ ಹಿಂಸೆ ಅಸಾಧ್ಯವಾಗಿರುತ್ತದೆ. ಗೀತೆಯು ನಮ್ಮನ್ನು ಸತ್ವ, ರಜಸ್ಸು ಮತ್ತು ತಮಸ್ಸುಗಳಿಗೆ ಮೀರಿದ ಸ್ಥಿತಿಗೆ ಕೊಂಡೊಯ್ಯಲು ಶ್ರಮಿಸುತ್ತದೆ. ಆ ಸ್ಥಿತಿ ಕೋಪ, ದ್ವೇಷ ಮುಂತಾದವನ್ನು ಬಹಿಷ್ಕರಿಸುತ್ತದೆ. ಆದರೆ ಅರ್ಜುನನು ಬಿಲ್ಲನ್ನು ಕಿವಿಯ ತುದಿಯವರೆಗೆ ಪ್ರತಿಸಲ ಎಳೆದಾಗಲೂ ಅವನ ಕಣ್ಣುಗಳು ಕೋಪದಿಂದ ಕೆಂಪೇರುವುದನ್ನು ನನ್ನ ಮನಸ್ಸಿನಲ್ಲಿ ನಾನು ಇಂದಿಗೂ ಚಿತ್ರಿಸಿಕೊಳ್ಳಬಲ್ಲೆ.

ಅರ್ಜುನನು ಯುದ್ಧಕ್ಕಿಳಿಯಲು ನಿರಾಕರಿಸಿದ್ದು ಅಹಿಂಸೆಯ ಮನೋಭಾವ ದಿಂದಲ್ಲ. ಹಿಂದೆ ಅವನು ಅನೇಕ ಯುದ್ಧಗಳನ್ನು ಮಾಡಿದ್ದ. ಆದರೆ ಈ ಸಲ ಮಾತ್ರ ಅವನು ಹುಸಿ ಕರುಣೆಗೆ ಶರಣಾಗಿದ್ದ. ತನ್ನ ಸ್ವಂತ ಬಂಧು ಬಾಂಧವರನ್ನು ಕೊಲ್ಲಲು ಅವನು ಅಳುಕಿದ್ದ. ಕೊಲ್ಲುವುದನ್ನು ಸ್ವರೂಪತಃ ಅರ್ಜುನನು ಎಂದಿಗೂ ಚರ್ಚಿಸಲಿಲ್ಲ. ಯಾರನ್ನೇ ಆಗಲಿ ದುಷ್ಟನೆಂದು ತಾನು ಪರಿಗಣಿಸಿದ್ದರೂ ಕೂಡ ಅವನನ್ನು ಕೊಲ್ಲುವುದಿಲ್ಲವೆಂದು ಅರ್ಜುನನು ಹೇಳಲಿಲ್ಲ. ಶ್ರೀಕೃಷ್ಣನು ಪ್ರತಿಯೊಬ್ಬರ ಅಂತರಾಳದ ಭಾವನೆಗಳನ್ನು ಅರಿತಿರುತ್ತಾನೆ. ಅವನು ಅರ್ಜುನನ ತಾತ್ಕಾಲಿಕ ಮೋಹವನ್ನು ಭೇದಿಸಿ ನೋಡಿದ. ಆದ್ದರಿಂದ ಅವನಿಗೆ ಹೇಳಿದ:

"ನೀನು ಈಗಾಗಲೇ ಹತ್ಯೆ ಎಸಗಿರುತ್ತೀಯೆ. ಇದ್ದಕ್ಕಿದ್ದಂತೆ ಅಹಿಂಸೆಯನ್ನು ನೀನು ಒಪ್ಪುವಂತೆ ಮಾಡಿಕೊಳ್ಳಲು ಸಾಧ್ಯವಿಲ್ಲ. ಈಗ ನೀನು ಪ್ರಾರಂಭಿಸಿರುವ ಯುದ್ಧವನ್ನು ಕೊನೆಮುಟ್ಟಿಸು." ಸ್ಕಾಟ್ಲೆಂಡಿನ ಎಕ್ಸ್‌ಪ್ರೆಸ್ ರೈಲಿನಲ್ಲಿ ಹೋಗುತ್ತಿರುವ ಪ್ರಯಾಣಿಕನೊಬ್ಬ ಇದ್ದಕ್ಕಿದ್ದಂತೆ ಪ್ರಯಾಣದಲ್ಲಿ ಬೇಸತ್ತು ರೈಲಿನಿಂದಾಚೆಗೆ ನೆಗೆದಲ್ಲಿ, ಅವನು ಆತ್ಮಹತ್ಯೆಯ ಅಪರಾಧ ಮಾಡಿರುತ್ತಾನೆ. ಅವನು ಪ್ರಯಾಣದ ಅಥವಾ ರೈಲುಗಾಡಿಯ ಪ್ರಯಾಣದ ನಿಷ್ಫಲತೆಯನ್ನು ಅರಿತಿರುವುದಿಲ್ಲ. ಅರ್ಜುನನ ವಿಷಯವೂ ಸದೃಶವಾಗಿತ್ತು. ಅಹಿಂಸಾಭಾವದ ಕೃಷ್ಣ ಅರ್ಜುನನಿಗೆ ಬೇರೆ ಯಾವುದೇ ಸಲಹೆ ನೀಡುವುದು ಸಾಧ್ಯವಾಗಿರಲಿಲ್ಲ. ಆದರೆ ನಿರ್ದಿಷ್ಟ ಸಂದರ್ಭವೊಂದರಲ್ಲಿ ಕೊಲ್ಲುವ ಸಲಹೆಯನ್ನು ನೀಡದ್ದ ಕಾರಣದಿಂದ ಗೀತೆಯು ಹಿಂಸೆಯನ್ನು ಉಪದೇಶಿಸುತ್ತದೆ ಅಥವಾ ಯದ್ಧವನ್ನು ಸಮರ್ಥಿಸುತ್ತದೆ ಎನ್ನುವುದು ಪ್ರತಿದಿನದ ಜೀವನದಲ್ಲಿ ಹಿಂಸೆಯ ಒಂದು ಪ್ರಮಾಣ ಅನಿವಾರ್ಯವಾಗುತ್ತದೆ ಎಂಬ ಕಾರಣದಿಂದ ಹಿಂಸೆಯು ಜೀವನದ ಒಂದು ನಿಯಮ ಎಂದು ಹೇಳುವಷ್ಟೇ ತಪ್ಪು. ಗೀತೆಯ ಭಾವವನ್ನು ಗ್ರಹಿಸುವವನಿಗೆ ಅದು ಅಹಿಂಸೆಯ ರಹಸ್ಯವನ್ನು, ಭೌತಿಕ ದೇಹದ ಮೂಲಕ ಆತ್ಮವನ್ನು ಸಾಕ್ಷಾತ್ಕರಿಸಿಕೊಳ್ಳುವ ರಹಸ್ಯವನ್ನು ಬೋಧಿಸುತ್ತದೆ.

ಜೊತೆಗೆ, ಧೃತರಾಷ್ಟ್ರ, ಯುಧಿಷ್ಠಿರ ಮತ್ತು ಅರ್ಜುನ ಎನ್ನುವವರು ಯಾರು? ಕೃಷ್ಣ ಯಾರು? ಅವರೆಲ್ಲ ಚಾರಿತ್ರಿಕ ಪಾತ್ರಗಳಾಗಿದ್ದರೇ? ಗೀತೆ ಅವರನ್ನು ಹಾಗೆ ವರ್ಣಿಸುತ್ತದೆಯೇ? ಯುದ್ಧದ ನಡುವೆ ಅರ್ಜುನನು ಇದ್ದಕ್ಕಿದ್ದಂತೆ ನಿಂತುಬಿಡುತ್ತಾನೆ, ಕೃಷ್ಣನಿಗೆ ಪ್ರಶ್ನೆ ಹಾಕುತ್ತಾನೆ ಮತ್ತು ಕೃಷ್ಣನು ಅವನೆದುರು ಇಡೀ ಗೀತೆಯನ್ನು ಪಠಿಸುತ್ತಾನೆ ಎನ್ನುವುದು ನಿಜವೇ? ಆ ಗೀತೆ ಯಾವುದು – ತನ್ನ ಮೋಹ ಹೋಯಿತು – ಎಂದು ಉದ್ಗರಿಸಿದ ತರುವಾಯ ಅರ್ಜುನನು ಮರೆತುಬಿಟ್ಟ ಗೀತೆಯೇ ಅಥವಾ ಅವನು ಕೃಷ್ಣನನ್ನು ಮತ್ತೆ ಹಾಡುವಂತೆ ಕೇಳಿ, ಕೃಷ್ಣನು ಹಾಗೆ ಮಾಡಲಾಗದೆ, ಆ ಕಾರಣದಿಂದ ಅನುಗೀತೆಯ ರೂಪದಲ್ಲಿ ಅವನಿಗೆ ನೀಡಿದ್ದೇ?

ದುರ್ಯೋಧನ ಮತ್ತು ಅವನ ಪಕ್ಷವನ್ನು ನಾನು ಮಾನವನಲ್ಲಿರುವ ಅಧಮ ಪ್ರವೃತ್ತಿಗಳೆಂದೂ, ಅರ್ಜುನ ಮತ್ತು ಅವನ ಪಕ್ಷವನ್ನು ಉತ್ತಮಪ್ರವೃತ್ತಿಗಳೆಂದೂ ಪರಿಗಣಿಸುತ್ತೇನೆ. ನಮ್ಮ ಸ್ವಂತ ದೇಹವೇ ಯುದ್ಧರಂಗ. ಈ ಎರಡು ಪಕ್ಷಗಳ ಒಂದು ಶಾಶ್ವತವಾದ ಯುದ್ಧ ನಡೆಯುತ್ತಿದೆ. ಕವಿ ಋಷಿ ಅದನ್ನು ಕಣ್ಣಿಗೆ ಕಟ್ಟುವಂತೆ ವರ್ಣಿಸಿದ್ದಾನೆ. ಶುದ್ಧ ಹೃದಯದಲ್ಲಿ ಸದಾ ಪಿಸುನುಡಿ ನುಡಿಯುತ್ತಿರುವ ಅಂತರ್ಯಾಮಿ ಕೃಷ್ಣ. ಗಡಿಯಾರದಂತೆ ಹೃದಯಕ್ಕೆ ಶುದ್ಧತೆಯ

ಕೀಲು ಕೊಡುವುದು ಆವಶ್ಯಕ. ಇಲ್ಲದಿದ್ದರೆ ಅಂತರ್ಯಾಮಿ ಮಾತನಾಡುವುದನ್ನು ನಿಲ್ಲಿಸುತ್ತಾನೆ.

ನಿಜವಾದ ಭೌತಿಕ ಯುದ್ಧ ಚರ್ಚೆಗೆ ಅನರ್ಹವಾದ ಅಸಂಭಾವ್ಯ ವಿಷಯವಾಗಿಲ್ಲ. ಅಹಿಂಸೆಯನ್ನು ಅರಿಯದವರಿಗೆ ಗೀತೆಯು ನಿರಾಶೆಯ ಪಾಠವೊಂದನ್ನು ಬೋಧಿಸುವುದಿಲ್ಲ. ಭಯಪಡುವವನು, ತನ್ನನ್ನು ಅಪಾಯದಿಂದ ಪಾರುಮಾಡಿಕೊಳ್ಳುವವನು, ರಾಗದ್ವೇಷಗಳಿಗೆ ಶರಣಾಗುವವನು, ಅವನು ಇಚ್ಛಿಸಲಿ ಬಿಡಲಿ, ಭೌತಿಕಯುದ್ಧವನ್ನು ಮಾಡಲೇ ಬೇಕು. ಆದರೆ ಅದು ಅವನ ಧರ್ಮವಲ್ಲ. ಧರ್ಮ ಒಂದು ಮತ್ತು ಒಂದು ಮಾತ್ರವೇ. ಅಹಿಂಸೆ ಎಂದರೆ ಮೋಕ್ಷ. ಮೋಕ್ಷವು ಸತ್ಯದ ಸಾಕ್ಷಾತ್ಕಾರ. ಇಲ್ಲಿ ಹೇಡಿತನಕ್ಕೆ ಸ್ವಲ್ಪವೂ ಅವಕಾಶವಿಲ್ಲ. ಈ ವಿಚಿತ್ರ ಪ್ರಪಂಚದಲ್ಲಿ ಹಿಂಸೆ ಸದಾ ಕಾಲವೂ ನಡಿಯುತ್ತದೆ. ಗೀತೆ ಅದರಿಂದ ಪಾರಾಗುವ ಹಾದಿಯನ್ನು ತೋರಿಸುತ್ತದೆ. ಆದರೆ ಹೇಡಿತನದ ಮತ್ತು ನಿರಾಶೆಯ ಮೂಲಕ ಪಾರಾಗುವುದು ಸರಿಯಾದ ಹಾದಿಯಲ್ಲ. ಯುದ್ಧದಲ್ಲಿ ಕೊಲ್ಲುವುದು ಮತ್ತು ಕೊಲ್ಲಲ್ಪಡುವುದು ಹೇಡಿತನಕ್ಕಿಂತ ಎಷ್ಟೋ ಉತ್ತಮ.

ಪತ್ರಕಾರನು ಉಲ್ಲೇಖಿಸಿರುವ ಶ್ಲೋಕಗಳ ಅರ್ಥ ಇನ್ನೂ ಸ್ಪಷ್ಟವಾಗದೆ ಹೋದರೆ, ಹಾಗೆ ಮಾಡಲು ನನಗೆ ಶಕ್ತಿಯಿಲ್ಲವೆಂದು ನಾನು ಒಪ್ಪಿಕೊಳ್ಳಬೇಕಾಗುತ್ತದೆ. ಸರ್ವಶಕ್ತನಾದ ಭಗವಂತ ಸೃಷ್ಟಿಕರ್ತ, ರಕ್ಷಕ ಮತ್ತು ನಾಶಕ ಆಗಿದ್ದಾನೆ ಮತ್ತು ಅವನು ಹಾಗಿರಬೇಕು ಎನ್ನುವುದನ್ನು ಒಪ್ಪಲಾಗಿದೆಯೇ? ಅವನು ಸೃಷ್ಟಿಸಿದರೆ ನಾಶಮಾಡುವ ಹಕ್ಕು ಅವನಿಗೆ ಖಂಡಿತವಾಗಿಯೂ ಇದೆ. ಆದರೂ ಅವನು ನಾಶಮಾಡುವುದಿಲ್ಲ, ಏಕೆಂದರೆ ಅವನು ಸೃಷ್ಟಿಸುವುದಿಲ್ಲ. ಹುಟ್ಟಿದ್ದೆಲ್ಲವೂ ಸಾಯಬೇಕು ಎನ್ನುವುದು ಅವನ ನಿಯಮ ಮತ್ತು ಅವನ ಕರುಣೆ ಇರುವುದು ಅದರಲ್ಲಿ. ಅವನ ನಿಯಮಗಳು ವ್ಯತ್ಯಾಸ ಮಾಡಲಾಗದಂತಹವು. ತಿಕ್ಕಲು ತಿರುಗಿದಂತೆ ಅವನು ಅವುಗಳನ್ನು ಬದಲಾಯಿಸಿದಲ್ಲಿ ನಮ್ಮೆಲ್ಲರ ಗತಿ ಏನು?

*ಯಂಗ್ ಇಂಡಿಯಾ*, 12 ನವೆಂಬರ್ 1925



# 27

# ಕೃಷ್ಣ ಜನ್ಮಾಷ್ಟಮಿ

[ಮೈಸೂರು ಸಂಸ್ಥಾನದ ಅರಸಿಕೆರೆಯಲ್ಲಿ ಗಾಂಧೀಜಿ ಮಾಡಿದ ಭಾಷಣವೊಂದರ ಸಾರಾಂಶ ಈ ಮುಂದಿನದು]

ಶ್ರೀಕೃಷ್ಣನ ಜೀವನ ನಮಗೆ ಯಾವ ಅರ್ಥ ಹೊಂದಿದೆ ಎಂಬುದು ಗೊತ್ತಿಲ್ಲ. ನಾವು ಗೀತೆಯನ್ನು ಓದುವುದಿಲ್ಲ. ನಮ್ಮ ಮಕ್ಕಳಿಗೆ ಅದನ್ನು ಹೇಳಿಕೊಡಲು ನಾವು ಯಾವ ಪ್ರಯತ್ನವನ್ನೂ ಮಾಡುವುದಿಲ್ಲ. ಗೀತೆಯು ಎಷ್ಟು ಅತ್ಯುತ್ಕೃಷ್ಟ ಗ್ರಂಥವೆಂದರೆ ಎಲ್ಲಾ ಮತದ, ವಯಸ್ಸಿನ ಮತ್ತು ದೇಶದ ಜನ ಅದನ್ನು ಗೌರವಪೂರ್ವಕವಾಗಿ ಓದಬಹುದು ಮತ್ತು ತಮ್ಮತಮ್ಮ ಧರ್ಮಗಳ ತತ್ವಗಳನ್ನು ಅದರಲ್ಲಿ ಕಾಣಬಹುದು. ಪ್ರತಿ ಜನ್ಮಾಷ್ಟಮಿಯ ದಿನವೂ ನಾವು ಕೃಷ್ಣನ ವಿಷಯಚಿಂತಿಸಿ, ಗೀತೆಯನ್ನು ಓದಿ, ಅದರ ಉಪದೇಶಗಳನ್ನು ಅನುಸರಿಸಲು ನಿರ್ಧರಿಸಿದ್ದಲ್ಲಿ ನಾವು ನಮ್ಮ ಇಂದಿನ ದುಃಸ್ಥಿತಿಯಲ್ಲಿ ಇರುತ್ತಿರಲಿಲ್ಲ. ಶ್ರೀಕೃಷ್ಣನು ತನ್ನ ಜೀವಮಾನವೆಲ್ಲ ಜನರ ಸೇವೆ ಮಾಡಿದ್ದ. ಅವನು ಜನಗಳ ನಿಜವಾದ ಸೇವಕನಾಗಿದ್ದ. ಕುರುಕ್ಷೇತ್ರದಲ್ಲಿ ಅವನು ಸೈನ್ಯಗಳ ಮುಂದಾಳಾಗಬುಹುದಿತ್ತು, ಆದರೆ ಅವನು ಅರ್ಜುನನ ಸಾರಥಿಯಾಗಲು ಇಷ್ಟಪಟ್ಟ. ಅವನ ಇಡೀ ಜೀವನ ಅವಿಚ್ಛಿನ್ನವಾದ ಕರ್ಮದ ಒಂದು ಗೀತೆಯಾಗಿತ್ತು. ಅವನು ದುರಹಂಕಾರಿ ದುರ್ಯೋಧನನ ಮಧುರ ಭಕ್ಷ್ಯಗಳನ್ನು ತಿರಸ್ಕರಿಸಿದ ಮತ್ತು ಬಡ ವಿದುರನ ಬಸಲೆಸೊಪ್ಪಿಗೆ ಇಷ್ಟಪಟ್ಟ. ಮಗುವಾಗಿದ್ದಾಗ ಅವನೊಬ್ಬ ಗೊಲ್ಲನಾಗಿದ್ದ. ನಾವು ಇಂದಿಗೂ ಗೋಪಾಲ ಎಂಬ ಹೆಸರಿನಿಂದ ಅವನನ್ನು ಅರಿತಿದ್ದೇವೆ. ಆದರೆ ಅವನ ಭಕ್ತರಾದ ನಾವು ಇಂದು ಗೋವನ್ನು ಉಪೇಕ್ಷಿಸಿದ್ದೇವೆ. ಆದಿಕರ್ಣಾಟಕರು ಹಸುಗಳನ್ನು ಕೊಲ್ಲುತ್ತಾರೆ ಮತ್ತು ಗೋಮಾಂಸವನ್ನು ತಿನ್ನುತ್ತಾರೆ. ನಮ್ಮ

ಶಿಶುಗಳು ಮತ್ತು ಅಶಕ್ತರು ಹಸುವಿನ ಹಾಲಿಲ್ಲದೆ ಹೋಗಬೇಕಾಗಿದೆ. ಕೃಷ್ಣನಿಗೆ ನಿದ್ದೆಯಾಗಲಿ ಸೋಮಾರಿತನವಾಗಲಿ ಇರಲಿಲ್ಲ. ಅವನು ನಿದ್ದೆಮಾಡದೆ ಜಗತ್ತಿನ ಬಗ್ಗೆ ಎಚ್ಚರವಾಗಿದ್ದ. ಅವನ ಸಂತತಿಯವರಾದ ನಾವು ಸೋಮಾರಿಗಳಾಗಿದ್ದೇವೆ ಮತ್ತು ನಮ್ಮ ಕೈಗಳ ಬಳಕೆಯನ್ನು ಮರೆತುಬಿಟ್ಟಿದ್ದೇವೆ. ಭಗವದ್ಗೀತೆಯಲ್ಲಿ ಭಗವಾನ್ ಕೃಷ್ಣನು ಭಕ್ತಿಯ ಮಾರ್ಗವನ್ನು ತೋರಿಸಿದ್ದಾನೆ. ಭಕ್ತಿಮಾರ್ಗ ಎನ್ನುವುದೇ ಕರ್ಮಮಾರ್ಗ. ನಾವು ಭಕ್ತರಾಗಲು ಅಥವಾ ಜ್ಞಾನಿಗಳಾಗಲು ಇಚ್ಛಿಸಲಿ ಕರ್ಮವು ಏಕಮಾತ್ರ ಮಾರ್ಗ; ಆದರೆ ಕರ್ಮವು ಸ್ವಾರ್ಥಕ್ಕಾಗಿ ಆಗಿರದೆ ಇತರರಿಗಾಗಿ ಆಗಬೇಕು ಎನ್ನುವುದನ್ನು ಲೋಕಮಾನ್ಯ ತಿಲಕರು ತೋರಿಸಿದ್ದಾರೆ. ಸ್ವಾರ್ಥಕ್ಕಾಗಿ ಮಾಡಿದ ಕರ್ಮ ಬಂಧಿಸುತ್ತದೆ. ಇತರರಿಗಾಗಿ ಮಾಡಿದ ಕರ್ಮಬಂಧನದಿಂದ ಬಿಡಿಸುತ್ತದೆ. ಹಿಂದೂಗಳು, ಮುಸಲ್ಮಾನರು ಮತ್ತು ಕ್ರೈಸ್ತರು, ಗಂಡಸರು, ಹೆಂಗಸರು ಮತ್ತು ಮಕ್ಕಳು ಸಾರ್ವತ್ರಿಕವಾಗಿ ಸ್ವಾರ್ಥವಿಲ್ಲದೆ ಪರಹಿತಾರ್ಥವಾಗಿ ಮಾಡಬಹುದಾದ ಕರ್ಮ ಯಾವುದು? ನೂಲುವುದೊಂದೇ ಆ ಯಾಜ್ಞಿಕ ಕರ್ಮ ಎನ್ನುವುದನ್ನು ತೋರಿಸಲು ನಾನು ಪ್ರಯತ್ನಪಟ್ಟಿದ್ದೇನೆ. ಏಕೆಂದರೆ ದೇವರ ಹೆಸರಿನಲ್ಲಿ ಯಾವುದಾದರೂ ಒಂದನ್ನು ಕಡುಬಡವರಿಗಾಗಿ ಏನಾದರೂ ಒಂದನ್ನು, ಅವರ ಸೋಮಾರಿ ಅಂಗಗಳಲ್ಲಿ ಚಟುವಟಿಕೆ ತುಂಬುವ ಯಾವುದಾದರೂ ಒಂದನ್ನು ಮಾಡುವಂತೆ ನಮ್ಮನ್ನು ಪ್ರೇರಿಸುವುದು ಅದೊಂದೇ. ನಿಜವಾದ ಭಕ್ತರಾಗಬೇಕಾಗಿದ್ದರೆ ನಾವು ಒಬ್ಬ ಬ್ರಾಹ್ಮಣ ಮತ್ತು ಒಬ್ಬ ಜಾಡಮಾಲಿಯ ನಡುವೆ ಯಾವ ವ್ಯತ್ಯಾಸವನ್ನೂ ಮಾಡಕೂಡದು ಎಂದು ಭಗವಾನ್ ಕೃಷ್ಣನು ಉಪದೇಶಿಸಿಯೂ ಇದ್ದಾನೆ. ಅದು ನಿಜವಾದಲ್ಲಿ ಹಿಂದೂಧರ್ಮದಲ್ಲಿ ಅಸ್ಪೃಶ್ಯತೆಗೆ ಯಾವುದೇ ಸ್ಥಾನ ಇರಲಾಗದು. ನೀವು ಇನ್ನೂ ಆ ಮೂಢನಂಬಿಕೆಯನ್ನು ಅಪ್ಪಿಕೊಂಡಿದ್ದರೆ ಕೃಷ್ಣನು ಹುಟ್ಟಿದ ಈ ಪವಿತ್ರ ದಿನದಲ್ಲಿ ನೀವು ಅದನ್ನು ತೊರೆದು ನಿಮ್ಮನ್ನು ಪರಿಶುದ್ಧಿಗೊಳಿಸಿಕೊಳ್ಳಬಹುದು. ಗೀತೆಯನ್ನು ದೃಢವಾಗಿ ನಂಬಿರುವವನು ಹಿಂದೂ ಮತ್ತು ಮುಸಲ್ಮಾನನ ನಡುವೆ ಯಾವುದೇ ವ್ಯತ್ಯಾಸ ಕಾಣಲಾರ, ಏಕೆಂದರೆ ಯಾವನು ಯಾವುದೇ ಹೆಸರಿನಿಂದಾಗಲಿ ಭಗವಂತನನ್ನು ನಿಜವಾದ ಮನೋಭಾವದಿಂದ ಆರಾಧಿಸುತ್ತಾನೆಯೋ ಅವನು ತನ್ನನ್ನು ಆರಾಧಿಸುತ್ತಾನೆ ಎಂದು ಭಗವಾನ್ ಕೃಷ್ಣನು ಘೋಷಿಸಿದ್ದಾನೆ. ಗೀತೆಯಲ್ಲಿ ನಿರೂಪಿಸಿರುವ ಭಕ್ತಿ, ಕರ್ಮ ಮತ್ತು ಪ್ರೇಮದ ಮಾರ್ಗ ಮಾನವನನ್ನು ಮಾನವ ತುಚ್ಛವಾಗಿ ಕಾಣುವುದಕ್ಕೆ ಯಾವುದೇ ಅವಕಾಶ ನೀಡುವುದಿಲ್ಲ.

*ಯಂಗ್ ಇಂಡಿಯಾ*, 1 ಸೆಪ್ಟಂಬರ್ 1927



# 28

# ಗೀತೆಯ ಸಂದೇಶ

1. 1888-89ರಲ್ಲಿ, ನನಗೆ ಗೀತೆಯ ಪ್ರಥಮ ಪರಿಚಯವಾದಾಗಲೇ ಅದು ಒಂದು ಚಾರಿತ್ರಿಕ ಕೃತಿಯಲ್ಲ ಎಂದು ನನಗನಿಸಿತು. ಆದರೆ ಭೌತಿಕಯುದ್ಧದ ಸೋಗಿನಲ್ಲಿ ಅದು ಮಾನವಕುಲದ ಹೃದಯಗಳಲ್ಲಿ ನಿರಂತರವಾಗಿ ನಡೆಯುತ್ತಿರುವ ಹೋರಾಟವನ್ನು ವರ್ಣಿಸಿತ್ತು ಮತ್ತು ಆ ಆಂತಿರಿಕ ಹೋರಾಟದ ವರ್ಣನೆಯನ್ನು ಹೆಚ್ಚು ಆಕರ್ಷಕವನ್ನಾಗಿ ಮಾಡಲು ಮಾತ್ರವೇ ಆ ಭೌತಿಕಯುದ್ಧವನ್ನು ತರಲಾಗಿತ್ತು. ಧರ್ಮದ ಮತ್ತು ಗೀತೆಯ ಹೆಚ್ಚು ನಿಕಟ ಅಧ್ಯಯನದಿಂದ ಈ ಪ್ರಾರಂಭಿಕ ಅಂತರ್ದರ್ಶನವು ಹೆಚ್ಚು ದೃಢವಾಯಿತು. ಮಹಾಭಾರತದ ಅಧ್ಯಯನ ಆದಕ್ಕೆ ಇನ್ನೂ ಹೆಚ್ಚಿನ ಸಮರ್ಥನೆ ನೀಡಿತು. ಮಹಾಭಾರತವನ್ನು ನಾನು ಅಂಗೀಕೃತ ಅರ್ಥದಲ್ಲಿ ಚಾರಿತ್ರಿಕ ಕೃತಿಯೆಂದು ಪರಿಗಣಿಸುವುದಿಲ್ಲ. ನನ್ನ ಅಭಿಪ್ರಾಯಕ್ಕೆ ಪೋಷಕವಾಗಿ ಆದಿಪರ್ವವು ಪ್ರಬಲ ಸಾಕ್ಷ್ಯವನ್ನು ಒಳಗೊಂಡಿದೆ. ಮುಖ್ಯಪಾತ್ರಗಳಿಗೆ ಅತಿಮಾನುಷ ಅಥವಾ ಅಧಮ ಮಾನುಷ ಮೂಲಗಳನ್ನು ಹೇಳುವ ಮುಲಕ ವ್ಯಾಸ ಮಹಾಕವಿಯು ರಾಜರ ಮತ್ತು ಅವರ ಪ್ರಜೆಗಳ ಚರಿತ್ರೆಯನ್ನು ತಳ್ಳಿಹಾಕಿದ್ದಾನೆ. ಅದರಲ್ಲಿ ವರ್ಣಿಸಿರುವ ವ್ಯಕ್ತಿಗಳು ಚಾರಿತ್ರಕರಾಗಿ ಇದ್ದಿರಬಹುದು, ಆದರೆ ಮಹಾಭಾರತದ ಕರ್ತೃವು ತನ್ನ ಧಾರ್ಮಿಕ ವಸ್ತುವನ್ನು ಮನಸ್ಸಿಗೆ ನಾಟಿಸಲು ಮಾತ್ರವೇ ಅವರನ್ನು ಬಳಸಿದ್ದಾನೆ.

2. ಮಹಾಭಾರತದ ಕರ್ತೃವು ಭೌತಿಕಯುದ್ಧದ ಅಗತ್ಯವನ್ನು ಸ್ಥಾಪಿಸಿಲ್ಲ. ಅದಕ್ಕೆ ವಿರುದ್ಧವಾಗಿ ಅದರ ನಿಷ್ಫಲತೆಯನ್ನು ಸಾಧಿಸಿದ್ದಾನೆ. ವಿಜಯಿಗಳು

ದುಃಖ ಮತ್ತು ಪಶ್ಚಾತ್ತಾಪಗಳ ಕಣ್ಣೀರು ಸುರಿಸುವಂತೆ ಮಾಡಿದ್ದಾನೆ ಮತ್ತು ಅವರಿಗೆ ಕ್ಲೇಶಗಳ ಆಸ್ತಿಯನ್ನು ಹೊರತು ಮತ್ತೇನನ್ನೂ ಬಿಟ್ಟಿಲ್ಲ.

3. ಈ ಮಹಾಕೃತಿಯಲ್ಲಿ ಗೀತೆ ಕಿರೀಟವಾಗಿದೆ. ಅದರ ಎರಡನೆ ಅಧ್ಯಾಯ ಭೌತಿಕಯುದ್ಧದ ನಿಯಮಗಳನ್ನು ತಿಳಿಸುವುದಕ್ಕೆ ಬದಲು ಪರಿಪೂರ್ಣಮಾನವ ನೊಬ್ಬನನ್ನು ಗುರುತಿಸುವುದು ಹೇಗೆ ಎಂಬುದನ್ನು ಹೇಳುತ್ತದೆ. ಗೀತೆಯ ಪರಿಪೂರ್ಣಮಾನವನ ಲಕ್ಷಣಗಳಲ್ಲಿ ಭೌತಿಕಯುದ್ಧಕ್ಕೆ ಯಾವುದನ್ನೂ ನಾನು ಕಾಣುವುದಿಲ್ಲ. ಅದರ ಇಡೀ ರಚನೆ ಯುದ್ಧಮಾಡುತ್ತಿರುವ ಪಕ್ಷಗಳ ನಡುವಣ ಸಂಬಂಧಗಳನ್ನು ನಿಯಂತ್ರಿಸುವ ನಿಯಮಗಳಿಗೆ ಅಸಂಗತವಾಗಿವೆ.

4. ಗೀತೆಯ ಕೃಷ್ಣ ಪರಿಪೂರ್ಣತೆ ಮತ್ತು ಸಮ್ಯಕ್ ಜ್ಞಾನಗಳ ಮೂರ್ತಸ್ವರೂಪನಾಗಿದ್ದಾನೆ. ಅಂದರೆ ತನ್ನ ಜನಗಳಿಗೆ ಆರಾಧ್ಯನಾಗಿದ್ದ ಕೃಷ್ಣ ಎಂದೂ ಜೀವಿಸಿರಲಿಲ್ಲ ಎಂದು ಅರ್ಥವಲ್ಲ. ಆದರೆ ಪರಿಪೂರ್ಣತೆ ಊಹಿತವಾಗಿದೆ. ಪೂರ್ಣಾವತಾರದ ಭಾವನೆ ತದನಂತರ ಕಾಲದಲ್ಲಿ ಬೆಳೆದದ್ದು.

5. ಮಾನವಕುಲಕ್ಕೆ ಅತ್ಯತಿಶಯವಾದ ಯಾವುದೋ ಸೇವೆ ಸಲ್ಲಿಸಿದವನನ್ನು ಹಿಂದೂಧರ್ಮದಲ್ಲಿ ಅವತಾರ ಎಂದು ಕರೆಯಲಾಗಿದೆ. ವಾಸ್ತವದಲ್ಲಿ ದೇಹಧರಿಸಿದ ಜೀವವೆಲ್ಲವೂ ದೇವರ ಒಂದು ಅವತಾರವೇ. ಆದರೆ ಪ್ರತಿಯೊಂದು ಜೀವಿಯನ್ನು ಅವತಾರವೆಂದು ಕರೆಯುವ ರೂಢಿಯಿಲ್ಲ. ತನ್ನ ಸ್ವಂತ ತಲೆಮಾರಿನಲ್ಲಿ ತನ್ನ ಆಚಾರವ್ಯವಹಾರದಲ್ಲಿ ಅತ್ಯಂತ ಧಾರ್ಮಿಕನಾಗಿರುವ ವ್ಯಕ್ತಿಗೆ ಮುಂದಿನ ತಲೆಮಾರಿನವರು ಈ ಗೌರವ ಸಲ್ಲಿಸುತ್ತಾರೆ. ಈ ಕ್ರಮದಲ್ಲಿ ನನಗೆ ಯಾವುದೇ ತಪ್ಪು ಕಾಣಿಸುವುದಿಲ್ಲ. ದೇವರ ಮಹತ್ವದಿಂದ ಇದು ಏನನ್ನೂ ಕಳೆಯುವುದಿಲ್ಲ ಮತ್ತು ಸತ್ಯಕ್ಕೆ ಯಾವುದೇ ಹಾನಿ ಸಂಭವಿಸಿರುವುದಿಲ್ಲ. "ಆದಂ ದೇವರಲ್ಲ ಆದರೆ ಅವನು ದೇವತ್ವದ ಒಂದು ಕಿಡಿ" ಎಂಬರ್ಥದ ಒಂದು ಉರ್ದು ಗಾದೆಯಿದೆ. ಆದ್ದರಿಂದ ಅತ್ಯಂತ ಧಾರ್ಮಿಕವಾಗಿ ನಡೆದುಕೊಂಡಿರುವವನು ತನ್ನಲ್ಲಿ ಅತ್ಯಂತ ದೈವಿಕ ಕಿಡಿಯನ್ನು ಹೊಂದಿರುತ್ತಾನೆ. ಈ ಭಾವನಾಸರಣಿಗೆ ಅನುಗುಣವಾಗಿ ಕೃಷ್ಣನು ಹಿಂದೂಧರ್ಮದಲ್ಲಿ ಅತ್ಯಂತ ಪೂರ್ಣಾವತಾರದ ಸ್ಥಾನವನ್ನು ಪಡೆದಿದ್ದಾನೆ.

6. ಅವತಾರದಲ್ಲಿನ ಈ ನಂಬಿಕೆ ವ್ಯಕ್ತಿಯೊಬ್ಬನ ಉನ್ನತ ಆಧ್ಯಾತ್ಮಿಕ ಆಕಾಂಕ್ಷೆಗೆ ಸಾಕ್ಷ್ಯವಾಗಿದೆ. ದೇವರಿಗೆ ಸದೃಶನಾಗಿ ಆಗುವವರೆಗೆ ಮಾನವನಿಗೆ ಆತ್ಮಶಾಂತಿ ಇರುವುದಿಲ್ಲ. ಈ ಸ್ಥಿತಿಯನ್ನು ತಲುಪಲು ಮಾಡುವ ಪ್ರಯತ್ನವು ಅತ್ಯುಚ್ಚ ಹಾಗೂ ಹೊಂದಿರಲು ಯೋಗ್ಯವಾದ ಏಕೈಕ ಮಹದಾಕಾಂಕ್ಷೆ ಆಗಿರುತ್ತದೆ. ಈ ಆತ್ಮಸಾಕ್ಷಾತ್ಕಾರ ಎಲ್ಲಾ ಧರ್ಮಗ್ರಂಥಗಳದ್ದಾಗಿರುವಂತೆಯೇ

ಗೀತೆಯ ವಸ್ತು ಕೂಡ. ಆದರೆ ಆದರ ಕರ್ತೃ ಆ ಸಿದ್ಧಾಂತವನ್ನು ಸ್ಥಾಪಿಸಲು ಅದನ್ನು ಬರೆಯಲಿಲ್ಲ ಎನ್ನುವುದು ಖಚಿತ. ಆತ್ಮಸಾಕ್ಷಾತ್ಕಾರವನ್ನು ಪಡೆಯಲು ಅತ್ಯುತ್ತಮ ಮಾರ್ಗವನ್ನು ತೋರಿಸುವುದೇ ಗೀತೆಯ ಗುರಿ ಎಂದು ನನಗೆ ಕಾಣುತ್ತದೆ. ಹಿಂದೂ ಧರ್ಮಗ್ರಂಥಗಳಲ್ಲಿ ಅಲ್ಲಿ ಇಲ್ಲಿ ಹರಡಿಹೋಗಿ ಆದರೂ ಹೆಚ್ಚುಕಡಿಮೆ ಸ್ಪಷ್ಟವಾಗಿ ಕಾಣಸಿಗುವ ವಿಷಯವೇ ಗೀತೆಯಲ್ಲಿ, ಆದಷ್ಟು ವಿಸ್ಪಷ್ಟ ಭಾಷೆಯಲ್ಲಿ, ಪುನರಾವೃತ್ತಿಯ ಸಂಭವವಿದ್ದರೂ, ನಿರೂಪಿತವಾಗಿದೆ.

7. ಕರ್ಮದ ಫಲಗಳನ್ನು ತ್ಯಜಿಸುವುದೇ ಆ ಅಸದೃಶ ಪರಿಹಾರ.

8. ಗೀತೆಯನ್ನು ರಚಿಸಿರುವುದು ಈ ಕೇಂದ್ರದ ಸುತ್ತ. ಈ ತ್ಯಾಗವೇ ಕೇಂದ್ರದಲ್ಲಿರುವ ಸೂರ್ಯ. ಭಕ್ತಿ, ಜ್ಞಾನ ಮತ್ತು ಉಳಿದವು ಗ್ರಹಗಳಂತೆ ಅದರ ಸುತ್ತಲೂ ಸುತ್ತುತ್ತವೆ. ದೇಹವನ್ನು ಸೆರೆಮನೆಗೆ ಹೋಲಿಸಲಾಗಿದೆ. ದೇಹವಿದ್ದೆಡೆ ಕ್ರಿಯೆ ಇರಲೇಬೇಕು. ದೇಹ ಧರಿಸಿದ ಯಾವುದೇ ವ್ಯಕ್ತಿಗೂ ಕೆಲಸದಿಂದ ವಿನಾಯಿತಿ ಇಲ್ಲ. ಆದರೂ ದೇಹವನ್ನು ದೇವರ ಆಲಯ ಎಂದು ಕಾಣುವ ಮೂಲಕ ಬಿಡುಗಡೆಯನ್ನು ಪಡೆಯಲು ಮಾನವನಿಗೆ ಸಾಧ್ಯ ಎಂದು ಎಲ್ಲಾ ಧರ್ಮಗಳೂ ಘೋಷಿಸುತ್ತವೆ. ಪ್ರತಿಯೊಂದು ಕ್ರಿಯೆಯೂ, ಅದೆಷ್ಟೇ ಕ್ಷುಲ್ಲಕದ್ದಾಗಿರಲಿ, ಕಲುಷಿತವಾಗಿರುತ್ತದೆ. ದೇಹವನ್ನು ದೇವಾಲಯವನ್ನಾಗಿ ಮಾಡುವುದು ಹೇಗೆ? ಅಂದರೆ ಒಬ್ಬನು ಕ್ರಿಯೆಯಿಂದ, ಎಂದರೆ ಪಾಪದ ಕಾಲುಷ್ಯದಿಂದ, ಬಿಡುಗಡೆ ಪಡೆಯುವುದು ಹೇಗೆ? "ನಿಷ್ಕಾಮಕರ್ಮದ ಮೂಲಕ; ಕರ್ಮದ ಫಲಗಳನ್ನು ತ್ಯಜಿಸುವ ಮೂಲಕ; ಎಲ್ಲ ಕರ್ಮಗಳನ್ನೂ ದೇವರಿಗೆ ಸಮರ್ಪಿಸುವ ಮೂಲಕ, ಎಂದರೆ ಒಬ್ಬನ ದೇಹ ಮತ್ತು ಆತ್ಮಗಳನ್ನು ಅವನಿಗೆ ಒಪ್ಪಿಸುವ ಮೂಲಕ."

9. ಆದರೆ ನಿಷ್ಕಾಮತ್ವ ಅಥವಾ ತ್ಯಾಗ ಆದರ ವಿಷಯವಾಗಿ ಕೇವಲ ಮಾತಾಡುವುದರಿಂದ ಬರುವುದಿಲ್ಲ. ಬೌದ್ಧಿಕ ಕಸರತ್ತಿನಿಂದ ಅದು ಸಿಗುವುದಿಲ್ಲ. ನಿರಂತರವಾದ ಹೃದಯದ ಮಂಥನದಿಂದ ಮಾತ್ರ ಅದು ಲಭ್ಯ. ತ್ಯಾಗವನ್ನು ಪಡೆಯಲು ಸಮ್ಯಕ್ ಜ್ಞಾನ ಅವಶ್ಯಕ. ಪಂಡಿತರು ಒಂದು ಬಗೆಯ ಜ್ಞಾನವನ್ನು ಹೊಂದಿರುತ್ತಾರೆ. ಅವರು ನೆನಪಿನಿಂದ ವೇದಗಳನ್ನು ಪಠಿಸಬಹುದು, ಆದರೂ ಅವರು ಭೋಗದಲ್ಲಿ ಮುಳುಗಿರಬಹುದು. ಜ್ಞಾನವು ಹುಚ್ಚಾಪಟ್ಟೆ ಅಡ್ಡಾಡದಿರಲು ಗೀತೆಯ ಭಕ್ತಿ ಅದರ ಜೊತೆಗಿರಬೇಕೆಂದು ಒತ್ತಿಹೇಳಿದ್ದಾನೆ ಮತ್ತು ಭಕ್ತಿಗೆ ಮೊದಲನೆ ಸ್ಥಾನ ನೀಡಿದ್ದಾನೆ. ಭಕ್ತಿಯಿಲ್ಲದ ಜ್ಞಾನ ಗುರಿತಪ್ಪಿದ ಹೊಡೆತದಂತೆ. ಆದ್ದರಿಂದ ಗೀತೆಯು "ಭಕ್ತಿಯನ್ನು ಪಡೆದುಕೊಳ್ಳಿ, ಜ್ಞಾನ ಅನುಸರಿಸಿ ಬರುತ್ತದೆ" ಎಂದು ಹೇಳುತ್ತದೆ. ಈ ಭಕ್ತಿ ಕೇವಲ ತುಟಿಯಂಚಿನ ಪೂಜೆಯಲ್ಲ. ಅದು

ಸಾವಿನೊಡನೆ ಸೆಣಸಾಟ. ಆದ್ದರಿಂದ ಭಕ್ತನ ಲಕ್ಷಣಗಳನ್ನು ಕುರಿತ ಗೀತೆಯ ಗುಣಮಾಪನ ಋಷಿಯ ಲಕ್ಷಣಗಳ ಮಾಪನಕ್ಕೆ ಸದೃಶವಾಗಿದೆ.

10. ಹೀಗೆ ಗೀತೆಯು ಅಪೇಕ್ಷಿಸುವ ಭಕ್ತಿ ಮೃದುಹೃದಯದ ಪ್ರವಾಹವಲ್ಲ. ಅದು ಖಂಡಿತವಾಗಿಯೂ ಅಂಧಶ್ರದ್ಧೆಯಲ್ಲ. ಗೀತೆಯ ಭಕ್ತಿಗೂ ಬಾಹ್ಯಾಚರಣೆಗಳಿಗೂ ಸ್ವಲ್ಪವೂ ಸಂಬಂಧವಿಲ್ಲ. ಭಕ್ತನು ಬೇಕಾದರೆ ಜಪಮಾಲೆಗಳನ್ನು, ಲಲಾಟಚಿಹ್ನೆಗಳನ್ನು ಉಪಯೋಗಿಸಬಹುದು, ನಿವೇದನ ಗಳನ್ನು ಅರ್ಪಿಸಬಹುದು, ಆದರೆ ಇವು ಅವನ ಭಕ್ತಿಯ ಪ್ರಮಾಣಗಳಲ್ಲ. ಯಾರ ವಿಷಯದಲ್ಲಿಯೂ ಅಸೂಯೆ ಪಡದವನು; ದಯೆಯ ಚಿಲುಮೆಯಾಗಿರುವವನು; ಅಹಂಕಾರವಿಲ್ಲದವನು; ಸ್ವಾರ್ಥವಿಲ್ಲದವನು; ಶೀತೋಷ್ಣ ಮತ್ತು ಸುಖ ದುಃಖಗಳನ್ನು ಸಮಾನವಾಗಿ ನೋಡುವವನು; ಸದಾ ಕ್ಷಮಾಶೀಲನಾಗಿರುವವನು; ಸದಾ ತೃಪ್ತಿಯಿಂದಿರುವವನು; ನಿರ್ಧಾರಗಳಲ್ಲಿ ದೃಢವಾಗಿರುವವನು; ಮನಸ್ಸು ಮತ್ತು ಆತ್ಮಗಳನ್ನು ಭಗವಂತನಿಗೆ ಅರ್ಪಿಸಿರುವವನು; ಯಾರಿಗೂ ಭಯ ಉಂಟುಮಾಡದವನು; ಇತರರಿಗೆ ಭಯಪಡದವನು; ಹರ್ಷೋತ್ಸಾಹ, ದುಃಖ ಮತ್ತು ಭಯ ಇಲ್ಲದವನು; ಪರಿಶುದ್ಧನಾಗಿರುವವನು; ಕ್ರಿಯೆಯಲ್ಲಿ ಕುಶಲನಾದವನು, ಆದರೆ ಅದರಿಂದ ಪ್ರಭಾವಿತನಾಗದವನು; ಒಳ್ಳೆಯ ಅಥವಾ ಕೆಟ್ಟ ಫಲವೆಲ್ಲವನ್ನೂ ತ್ಯಾಗ ಮಾಡುವವನು; ಮಿತ್ರ ಮತ್ತು ಶತ್ರುವನ್ನು ಸಮಾನವಾಗಿ ನೋಡುವವನು; ಮಾನಾವಮಾನಗಳ ಸೋಂಕಿಲ್ಲದವನು; ಹೊಗಳಿಕೆಯಿಂದ ಹಿಗ್ಗದವನು; ಜನ ಅವನ ವಿಷಯವಾಗಿ ಕೆಟ್ಟದನ್ನು ಆಡಿದಾಗ ಕುಗ್ಗಿಹೋಗದವನು; ಮೌನ ಮತ್ತು ಏಕಾಂತತೆಯನ್ನು ಪ್ರೀತಿಸುವವನು; ಸುಶಿಕ್ಷಿತ ವಿವೇಕವುಳ್ಳವನು – ಇವನು ಭಕ್ತ. ಇಂಥ ಭಕ್ತಿಯು ಪ್ರಬಲವಾದ ಆಸಕ್ತಿಗಳೊಡನೆ ಏಕಕಾಲದಲ್ಲಿ ಇರುವುದು ಸಮಂಜಸವಲ್ಲ.

11. ನಿಜವಾದ ಭಕ್ತನಾಗಿರುವುದು ಎಂದರೆ ಆತ್ಮವನ್ನು ಸಾಕ್ಷಾತ್ಕರಿಸಿ ಕೊಳ್ಳುವುದು ಎನ್ನುವುದನ್ನು ನಾವು ಹೀಗೆ ಅರಿಯುತ್ತೇವೆ. ಆತ್ಮಸಾಕ್ಷಾತ್ಕಾರ ಎನ್ನುವುದು ಪ್ರತ್ಯೇಕವಾದ ಒಂದು ವಿಷಯವಲ್ಲ. ಒಂದು ರೂಪಾಯಿ ನಮಗೆ ವಿಷವನ್ನೋ ಅಮೃತವನ್ನೋ ಕೊಂಡುಕೊಡಬಹುದು. ಆದರೆ ಜ್ಞಾನ ಅಥವಾ ಭಕ್ತಿ ನಮಗೆ ಮೋಕ್ಷವನ್ನೋ ಬಂಧನವನ್ನೋ ಕೊಂಡುಕೊಡಲಾರದು. ಇವು ವಿನಿಮಯದ ಮಾಧ್ಯಮವಲ್ಲ. ಅವೇ ಸ್ವತಃ ನಾವು ಅಪೇಕ್ಷಿಸುವ ವಸ್ತುಗಳು. ಅಂದರೆ, ಸಾಧನ ಮತ್ತು ಗುರಿ ಒಂದೇ ಆಗಿರದಿದ್ದರೂ ಬಹುತೇಕವಾಗಿ ಅವು ಅಂತಿವೆ. ಸಾಧನದ ಕೊಟ್ಟಕೊನೆ ಮೋಕ್ಷ. ಗೀತೆಯ ಮೋಕ್ಷ ಸಂಪೂರ್ಣಶಾಂತಿ.

12. ಆದ್ದರಿಂದ ಅಂಥ ಜ್ಞಾನ ಮತ್ತು ಭಕ್ತಿ, ಅವು ನಿಜವಾದವು ಆಗಿರಬೇಕಾದರೆ, ಕರ್ಮಫಲಗಳ ತ್ಯಾಗದ ಪರೀಕ್ಷೆಯಲ್ಲಿ ತೇರ್ಗಡೆಯಾಗಬೇಕು. ಸರಿತಪ್ಪುಗಳ ಬರಿಯ ಜ್ಞಾನ ಒಬ್ಬನನ್ನು ಮೋಕ್ಷಕ್ಕೆ ಅರ್ಹನನ್ನಾಗಿ ಮಾಡಲಾರವು. ಸಾಮಾನ್ಯ ಅಭಿಪ್ರಾಯಗಳಂತೆ, ಕೇವಲ ಓದಿರುವ ವ್ಯಕ್ತಿ ಪಂಡಿತ ಎನಿಸಿಕೊಳ್ಳುತ್ತಾನೆ. ಅವನು ಯಾವುದೇ ಕೆಲಸ ಮಾಡಬೇಕಾಗಿಲ್ಲ. ಒಂದು ಸಣ್ಣ ಲೋಟವನ್ನು ಎತ್ತುವುದನ್ನೂ ಅವನು ಬಂಧನವೆಂದು ಎಣಿಸುತ್ತಾನೆ. ಜ್ಞಾನದ ಒಂದು ಲಕ್ಷಣ ಕೆಲಸಕ್ಕೆ ಸಿಗದಿರುವಿಕೆ ಎಂದಾಗಿರುವ ಕಡೆ ಲೋಟವನ್ನು ಎತ್ತುವಂಥ ಲೌಕಿಕಕಾರ್ಯಕ್ಕೆ ಯಾವುದೇ ಅವಕಾಶವಿಲ್ಲ.

13. ಅಥವಾ ಭಕ್ತಿಯನ್ನು ತೆಗೆದುಕೊಳ್ಳಿ. ಭಕ್ತಿಯ ವಿಷಯದಲ್ಲಿರುವ ಸಾಮಾನ್ಯಭಾವನೆ ದಯಾರ್ದ್ರಹೃದಯತೆ, ಮಣಿಗಳನ್ನು ಎಣಿಸುವುದು ಇತ್ಯಾದಿ ಮತ್ತು ಮಣಿಗಳನ್ನು ಎಣಿಸುವುದು ಮುಂತಾದವುಗಳ ಭಂಗವಾದೀತೆಂದು ಪ್ರಾಯವಾದ ಕೆಲಸವನ್ನು ಕೂಡ ಮಾಡದಿರುವುದು. ಆದ್ದರಿಂದ ಈ ಭಕ್ತ ಊಟಮಾಡುವುದು, ನೀರು ಕುಡಿಯುವುದು ಮೊದಲಾದವಕ್ಕೆ ಮಾತ್ರ ಜಪಮಾಲೆಯನ್ನು ಕೆಳಗಿಡುತ್ತಾನೆ, ಹಿಟ್ಟು ಬೀಸಲು ಅಥವಾ ರೋಗಿಗಳಿಗೆ ಶುಶ್ರೂಷೆ ಮಾಡಲು ಎಂದಿಗೂ ಹಾಗೆ ಮಾಡುವುದಿಲ್ಲ.

14. ಆದರೆ ಗೀತೆಯು ಹೀಗೆ ಹೇಳುತ್ತದೆ: "ಕೆಲಸ ಮಾಡದೆ ಯಾವನೂ ತನ್ನ ಗುರಿ ಸಾಧಿಸಿಲ್ಲ. ಜನಕನಂಥ ಜನ ಕೂಡ ಕೆಲಸದ ಮೂಲಕ ಮೋಕ್ಷ ಪಡೆದರು. ನಾನು ಕೂಡ ಸೋಮಾರಿತನದಿಂದ ಕೆಲಸ ನಿಲ್ಲಿಸಿದರೆ, ಪ್ರಪಂಚ ನಾಶವಾಗುತ್ತದೆ. ಆದ್ದರಿಂದ ಜನಸಾಮನ್ಯರು ಕೆಲಸದಲ್ಲಿ ತೊಡಗುವುದು ಇನ್ನೂ ಎಷ್ಟು ಹೆಚ್ಚು ಅಗತ್ಯವಾದುದು?"

15. ಎಲ್ಲಾ ಕಾರ್ಯವು ಬಂಧಿಸುತ್ತದೆ ಎನ್ನುವುದು ಒಂದು ಕಡೆ ನಿರ್ವಿವಾದವಾಗಿದ್ದರೆ, ಇನ್ನೊಂದು ಕಡೆ ಎಲ್ಲಾ ಜೀವಿಗಳೂ, ಅವುಗಳಿಗೆ ಇಚ್ಛೆ ಇರಲಿ ಅಥವಾ ಬಿಡಲಿ, ಯಾವುದೋ ಕೆಲಸವನ್ನು ಮಾಡುತ್ತಿರಬೇಕು ಎನ್ನುವುದು ಅಷ್ಟೇ ನಿಜ. ಇಲ್ಲಿ ಕೆಲಸ ಎಂಬ ಪದದಲ್ಲಿ ಮಾನಸಿಕವಾಗಿರಲಿ ದೈಹಿಕವಾಗಿರಲಿ ಎಲ್ಲಾ ಕೆಲಸವನ್ನೂ ಸೇರಿಸಬೇಕು. ಹಾಗಾದರೆ ಕೆಲಸ ಮಾಡುತ್ತಿದ್ದರೂ ಕೂಡ ಒಬ್ಬ ವ್ಯಕ್ತಿ ಕರ್ಮದ ಬಂಧನದಿಂದ ಮುಕ್ತನಾಗುವುದು ಹೇಗೆ? ಈ ಸಮಸ್ಯೆಯನ್ನು ಗೀತೆಯು ಪರಿಹರಿಸಿರುವ ರೀತಿ, ನನಗೆ ತಿಳಿದಂತೆ, ಅನನ್ಯವಾಗಿದೆ. ಗೀತೆಯು ಹೀಗೆ ಹೇಳುತ್ತದೆ:

"ನಿನಗೆ ವಿಧಿಸಿದ ಕೆಲಸವನ್ನು ಮಾಡು ಆದರೆ ಅದರ ಫಲವನ್ನು ತ್ಯಜಿಸು. ಅನಾಸಕ್ತನಾಗಿರು ಮತ್ತು ಕೆಲಸ ಮಾಡು. ಪ್ರತಿಫಲಕ್ಕಾಗಿ ಯಾವುದೇ ಆಸೆಪಡದೆ

ಕೆಲಸ ಮಾಡು."

ಇದು ಗೀತೆಯ ನಿಸ್ಸಂದಿಗ್ಧವಾದ ಉಪದೇಶ. ಕರ್ಮವನ್ನು ತೊರೆಯುವವನು ಪತನ ಹೊಂದುತ್ತಾನೆ. ಕೇವಲ ಪ್ರತಿಫಲವನ್ನು ತೊರೆಯುವವನು ಉದ್ಧಾರವಾಗುತ್ತಾನೆ. ಆದರೆ ಫಲದ ತ್ಯಾಗ ಎಂದರೆ ಪರಿಣಾಮದ ಬಗ್ಗೆ ಉಪೇಕ್ಷೆ ಎಂದು ಅರ್ಥವಲ್ಲ. ಪ್ರತಿಯೊಂದು ಕಾರ್ಯಕ್ಕೆ ಸಂಬಂಧಿಸಿದಂತೆ ಅದರಿಂದ ನಿರೀಕ್ಷಿತವಾದ ಫಲ, ಅದಕ್ಕೆ ಸಾಧನ ಮತ್ತು ಅದಕ್ಕೆ ಬೇಕಾದ ಶಕ್ತಿ ಇವನ್ನು ಒಬ್ಬನು ಅರಿತಿರಬೇಕು. ಈ ಸಿದ್ಧತೆ ಹೊಂದಿರುವವನು ಫಲಕ್ಕಾಗಿ ಆಸೆ ಹೊಂದಿರುವುದಿಲ್ಲ, ಆದರೂ ತನ್ನ ಮುಂದಿರುವ ಕೆಲಸವನ್ನು ಸರಿಯಾಗಿ ನೆರವೇರಿಸುವುದರಲ್ಲಿ ಪೂರ್ತಿತೊಡಗಿರುತ್ತಾನೆ. ಅವನು ತನ್ನ ಕಾರ್ಯದ ಫಲಗಳನ್ನು ತ್ಯಜಿಸಿದ್ದಾನೆ ಎಂದು ಹೇಳಲಾಗುತ್ತದೆ.

16. ಮತ್ತೆ, ತ್ಯಾಗ ಎಂದರೆ ತ್ಯಾಗಮಾಡುವವನಿಗೆ ಫಲದ ಅಭಾವ ಎಂದು ಅರ್ಥ ಎಂದು ಯಾರೂ ಎಣಿಸಬಾರದು. ಗೀತೆಯ ವಾಕ್ಯ ಅಂಥ ಅರ್ಥವನ್ನು ಸಮರ್ಥಿಸುವುದಿಲ್ಲ. ತ್ಯಾಗ ಎಂದರೆ ಫಲಕ್ಕಾಗಿ ಹಂಬಲದ ಅಭಾವ ಎಂದು ಅರ್ಥ. ವಾಸ್ತವವಾಗಿ, ತ್ಯಾಗಮಾಡುವವನು ಅದಕ್ಕೆ ಸಾವಿರಪಟ್ಟು ಪಡೆಯುತ್ತಾನೆ. ಗೀತೆಯ ತ್ಯಾಗ ಶ್ರದ್ಧೆಯ ಕಠಿನ ಪರೀಕ್ಷೆ. ಸದಾ ಫಲದ ವಿಷಯವಾಗಿ ಚಿಂತಿಸುವವನು ತನ್ನ ಕರ್ತವ್ಯವನ್ನು ನೆರವೇರಿಸುವಾಗ ಅನೇಕವೇಳೆ ಎದೆಗುಂದುತ್ತಾನೆ. ಅವನು ತಾಳ್ಮೆಗೆಡುತ್ತಾನೆ, ಆಮೇಲೆ ಕೋಪಗೊಳ್ಳುತ್ತಾನೆ ಮತ್ತು ಅಯೋಗ್ಯ ಕೆಲಸಗಳನ್ನು ಮಾಡತೊಡಗುತ್ತಾನೆ. ಅವನು ಯಾವುದೇ ಕಾರ್ಯಕ್ಕೆ ದೃಢವಾಗಿ ಬದ್ಧನಾಗದೆ ಕಾರ್ಯದಿಂದ ಕಾರ್ಯಕ್ಕೆ ನೆಗೆಯುತ್ತಾನೆ. ಫಲಗಳ ಚಿಂತೆಯಲ್ಲಿ ಮಗ್ನನಾಗಿರುವವನು ಇಂದ್ರಿಯವಿಷಯಗಳಲ್ಲಿ ಲೋಲುಪನಾಗಿರುವ ವ್ಯಕ್ತಿಯಂತಿರುತ್ತಾನೆ. ಅವನು ಸದಾ ವ್ಯಾಕುಲನಾಗಿರುತ್ತಾನೆ; ಅವನು ಎಲ್ಲ ಅಳುಕುಗಳಿಗೂ ವಿದಾಯ ಹೇಳುತ್ತಾನೆ; ಅವನ ಅಭಿಪ್ರಾಯದಲ್ಲಿ ಎಲ್ಲವೂ ಸರಿ; ಆದ್ದರಿಂದ ಅವನು ತನ್ನ ಗುರಿ ಸಾಧಿಸಲು ನ್ಯಾಯದ ಮತ್ತು ಅನ್ಯಾಯದ ಮಾರ್ಗಗಳನ್ನು ಅವಲಂಬಿಸುತ್ತಾನೆ.

17. ಫಲಕಾಮನೆಯ ಕಹಿ ಅನುಭವಗಳಿಂದ ಗೀತೆಯ ಕರ್ತೃವು ಫಲತ್ಯಾಗದ ಮಾರ್ಗವನ್ನು ಕಂಡುಹಿಡಿದು, ಜಗತ್ತಿನ ಮುಂದೆ ಅದನ್ನು ಅತ್ಯಂತ ಮನವೊಪ್ಪಿಸುವ ರೀತಿಯಲ್ಲಿ ಮಂಡಿಸಿದ. ಸಾಮಾನ್ಯಾಭಿಪ್ರಾಯದಂತೆ ಧರ್ಮವು ಯಾವಾಗಲೂ ಪ್ರಾಪಂಚಿಕ ಸೌಖ್ಯಕ್ಕೆ ವಿರುದ್ಧವಾಗಿರುತ್ತದೆ. "ವ್ಯಾಪಾರ ಮತ್ತು ಅಂಥ ಇತರ ವಿಷಯಗಳಲ್ಲಿ ಒಬ್ಬನು ಧಾರ್ಮಿಕವಾಗಿ ವರ್ತಿಸಲಾಗುವುದಿಲ್ಲ. ಅಂಥ ವೃತ್ತಿಗಳಲ್ಲಿ ಧರ್ಮಕ್ಕೆ ಸ್ವಲ್ಪವೂ ಸ್ಥಾನವಿಲ್ಲ. ಮೋಕ್ಷಸಾಧನೆಗೆ ಮಾತ್ರ ಧರ್ಮ ಇರುವುದು" ಎಂದು ಅನೇಕ ಲೌಕಿಕವಿವೇಕಿಗಳು ಹೇಳುವುದನ್ನು

ಕೇಳಿದ್ದೇವೆ. ನನ್ನ ಅಭಿಪ್ರಾಯದಲ್ಲಿ ಗೀತೆಯ ಕರ್ತೃ ಈ ಭ್ರಾಂತಿಯನ್ನು ತೊಲಗಿಸಿದ್ದಾನೆ. ಮೋಕ್ಷ ಮತ್ತು ಪ್ರಾಪಂಚಿಕ ವ್ಯವಹಾರಗಳ ನಡುವೆ ಅವನು ಯಾವುದೇ ಗಡಿಗೆರೆಯನ್ನು ಎಳೆದಿಲ್ಲ. ತದ್ವಿರುದ್ಧವಾಗಿ ಧರ್ಮವು ನಮ್ಮ ಪ್ರಾಪಂಚಿಕ ವ್ಯವಹಾರಗಳನ್ನು ಕೂಡ ನಿಯಂತ್ರಿಸಬೇಕು ಎಂದು ಅವನು ತೋರಿಸಿದ್ದಾನೆ. ದೈನಂದಿನ ಆಚರಣೆಯಲ್ಲಿ ಯಾವುದನ್ನು ಅನುಸರಿಸಲು ಆಗುವುದಿಲ್ಲವೋ ಅದನ್ನು ಧರ್ಮ ಎಂದು ಕರೆಯಲಾಗುವುದಿಲ್ಲ ಎಂದು ಗೀತೆ ನಮಗೆ ಉಪದೇಶಿಸುತ್ತದೆ ಎಂದು ನನಗನಿಸುತ್ತದೆ. ಹೀಗೆ, ಗೀತೆಯ ಪ್ರಕಾರ, ಅನಾಸಕ್ತಿಯಿಂದ ಮಾಡಲಾಗದ ಕಾರ್ಯಗಳೆಲ್ಲವೂ ನಿಷಿದ್ಧವಾದವು. ಈ ಸ್ವರ್ಣಸೂತ್ರ ಮಾನವರನ್ನು ಅನೇಕ ಗಂಡಾಂತರಗಳಿಂದ ರಕ್ಷಿಸುತ್ತದೆ. ಈ ವ್ಯಾಖ್ಯಾನದ ಪ್ರಕಾರ ಖೂನಿ, ಸುಳ್ಳು ಹೇಳುವುದು, ವಿಷಯಲಂಪಟತೆ ಮೊದಲಾದವನ್ನು ಪಾಪವೆಂದು ಮತ್ತು ಆದ್ದರಿಂದ ನಿಷಿದ್ಧವೆಂದು ಪರಿಗಣಿಸಬೇಕು. ಮನುಷ್ಯನ ಜೀವನ ಆಗ ಸರಳವಾಗುತ್ತದೆ ಮತ್ತು ಆ ಸರಳತೆಯಿಂದ ಶಾಂತಿ ಉದ್ಭವಿಸುತ್ತದೆ.

18. ಈ ರೀತಿ ಯೋಚನೆ ಮಾಡುತ್ತಾ, ಗೀತೆಯ ಅತಿ ಮುಖ್ಯ ಉಪದೇಶವನ್ನು ಸ್ವಂತ ಜೀವನದಲ್ಲಿ ಅನುಷ್ಠಾನಕ್ಕೆ ತರುವ ಪ್ರಯತ್ನದಲ್ಲಿ ಒಬ್ಬನು ಸತ್ಯ ಮತ್ತು ಅಹಿಂಸೆಯನ್ನು ಅನುಸರಿಸುವುದು ಕಡ್ಡಾಯವಾಗುತ್ತದೆ ಎಂದು ನನಗೆ ಅನಿಸಿದೆ. ಫಲದ ಬಗ್ಗೆ ಯಾವುದೇ ಆಸೆಯಿಲ್ಲದಿರುವಾಗ ಅಸತ್ಯಕ್ಕಾಗಿ ಅಥವಾ ಹಿಂಸೆಗಾಗಿ ಯಾವ ಪ್ರಲೋಭನೆಯೂ ಇರುವುದಿಲ್ಲ. ಅಸತ್ಯದ ಅಥವಾ ಹಿಂಸೆಯ ಯಾವುದೇ ದೃಷ್ಟಾಂತ ತೆಗೆದುಕೊಳ್ಳಿ. ಆಶಿಸಿದ ಗುರಿಯೊಂದರ ಸಾಧನೆಯ ಅಪೇಕ್ಷೆ ಅದರ ಹಿಂದೆ ಇದ್ದುದು ಕಂಡುಬರುತ್ತದೆ. ಆದರೆ ಅಹಿಂಸೆಯನ್ನು ಸ್ಥಾಪಿಸಲು ಗೀತೆಯನ್ನು ಬರೆಯಲಿಲ್ಲ ಎನ್ನುವುದನ್ನು ಧಾರಾಳವಾಗಿ ಒಪ್ಪಬಹುದು. ಗೀತೆಯ ಯುಗಕ್ಕಿಂತ ಮುಂಚೆಯೇ ಅದು ಸರ್ವಸಮ್ಮತವಾದ ಮತ್ತು ಪ್ರಧಾನವಾದ ಒಂದು ಕರ್ತವ್ಯವಾಗಿತ್ತು. ಗೀತೆಯು ಫಲತ್ಯಾಗದ ಸಂದೇಶವನ್ನು ಸಾರಬೇಕಾಗಿತ್ತು. ಇದು ಎರಡನೆಯ ಅಧ್ಯಾಯದಷ್ಟು ಮೊದಲೇ ನಿರೂಪಿತವಾಗಿದೆ.

19. ಆದರೆ ಗೀತೆಯು ಅಹಿಂಸೆಯಲ್ಲಿ ನಂಬಿಕೆಯಿಟ್ಟಿದ್ದರೆ ಅಥವಾ ಅದು ನಿಷ್ಕಾಮತೆಯಲ್ಲಿ ಅಂತರ್ಗತವಾಗಿದ್ದರೆ ಕೃತಿಕರ್ತಯುದ್ಧದಂಥ ದೃಷ್ಟಾಂತವನ್ನು ಏಕೆ ತೆಗೆದುಕೊಂಡ? ಗೀತೆಯನ್ನು ಬರೆದಾಗ, ಜನ ಅಹಿಂಸೆಯಲ್ಲಿ ನಂಬಿದ್ದರೂ, ಯುದ್ಧಗಳು ನಿಷಿದ್ಧವಾಗಿರದಿದ್ದುದು ಮಾತ್ರವಲ್ಲ, ಅವುಗಳಿಗೂ ಅಹಿಂಸೆಗೂ ನಡುವಣ ವಿರೋಧವನ್ನು ಯಾರೂ ಗಮನಿಸಿರಲಿಲ್ಲ.

20. ಫಲತ್ಯಾಗದ ಸೂಚಿತಾರ್ಥಗಳ ಮೌಲ್ಯ ನಿರ್ಧರಿಸುವಲ್ಲಿ ನಾವು

ಅಹಿಂಸೆ ಮುಂತಾದವುಗಳಿಗೆ ಸಂಬಂಧಿಸಿದಂತೆ ಗೀತೆಯ ಕರ್ತೃವಿನ ಪರಿಮಿತಿಗಳ ವಿಷಯವಾಗಿ ಅವನ ಮನಃಪರೀಕ್ಷೆ ಮಾಡಬೇಕಾಗಿಲ್ಲ. ಏಕೆಂದರೆ ಒಬ್ಬ ಕವಿ ನಿರ್ದಿಷ್ಟ ಸತ್ಯವೊಂದನ್ನು ಜಗತ್ತಿನ ಮುಂದೆ ಮಂಡಿಸುತ್ತಾನೆ ಎಂಬ ಕಾರಣದಿಂದ ಅವನು ಅದರ ಎಲ್ಲಾ ಮಹತ್ವರಿಣಾಮಗಳನ್ನು ಅರಿತಿರುತ್ತಾನೆ ಅಥವಾ ಲೆಕ್ಕ ಹಾಕಿರುತ್ತಾನೆ ಅಥವಾ ಹಾಗೆ ಮಾಡಿ, ಅವನ್ನು ಸಂಪೂರ್ಣವಾಗಿ ನಿರೂಪಿಸಲು ಯಾವಾಗಲೂ ಶಕ್ತನಾಗಿರುತ್ತಾನೆ ಎನ್ನುವುದು ಅಗತ್ಯವಾಗಿ ಅನುಸರಿಸುವುದಿಲ್ಲ. ಕಾವ್ಯದ ಮತ್ತು ಕವಿಯ ಮಹತ್ವ ಪ್ರಾಯಶಃ ಇರುವುದು ಇದರಲ್ಲಿ. ಮಾನವನಂತೆಯೇ, ಮಹಾಕೃತಿಗಳ ಅರ್ಥ ವಿಕಾಸಕ್ಕೆ ಒಳಪಟ್ಟಿರುತ್ತದೆ. ಭಾಷೆಗಳ ಇತಿಹಾಸವನ್ನು ಪರೀಕ್ಷಿಸಿದಾಗ, ಮುಖ್ಯವಾದ ಪದಗಳ ಅರ್ಥ ಬದಲಾಯಿಸಿ ಇರುವುದನ್ನು ಅಥವಾ ವಿಸ್ತರಿಸಿರುವುದನ್ನು ನಾವು ಗಮನಿಸುತ್ತೇವೆ. ಗೀತೆಯ ವಿಷಯದಲ್ಲಿ ಇದು ನಿಜ. ರೂಢಿಯಲ್ಲಿದ್ದ ಕೆಲವು ಪದಗಳ ಅರ್ಥಗಳನ್ನು ಅದರ ಕರ್ತೃವೇ ವಿಸ್ತರಿಸಿದ್ದಾನೆ. ಕೇವಲ ಮೇಲುನೋಟದ ಪರಿಶೀಲನೆಯಿಂದಲೇ ನಾವು ಇದನ್ನು ಕಂಡುಹಿಡಿಯಬಲ್ಲೆವು. ಗೀತೆಯ ಯುಗಕ್ಕಿಂತ ಮುಂಚಿನ ಯುಗದಲ್ಲಿ ಯಜ್ಞದಲ್ಲಿ ಪ್ರಾಣಿಗಳನ್ನು ಅರ್ಪಿಸುವುದು ಪ್ರಾಯಶಃ ಅಂಗೀಕಾರಾರ್ಹವಾಗಿತ್ತು. ಆದರೆ ಗೀತೆಯ ಅರ್ಥದಲ್ಲಿನ ಯಜ್ಞದಲ್ಲಿ ಅದರ ಸುಳಿವು ಕೂಡ ಇಲ್ಲ. ಗೀತೆಯಲ್ಲಿ ದೇವರ ಮೇಲಿನ ನಿರಂತರವಾದ ಚಿತ್ತೈಕಾಗ್ರತೆ ಯಜ್ಞಗಳ ರಾಜ. ಮೂರನೆಯ ಅಧ್ಯಾಯವು ಯಜ್ಞ ಎಂದರೆ ಮುಖ್ಯವಾಗಿ ಸೇವೆಗಾಗಿ ಕಾಯಕ ಎಂದು ಅರ್ಥ ಎನ್ನುವುದನ್ನು ತೋರಿಸುವಂತೆ ಕಾಣುತ್ತದೆ. ಮೂರು ಮತ್ತು ನಾಲ್ಕನೆಯ ಅಧ್ಯಾಯಗಳನ್ನು ಒಟ್ಟಿಗೆ ಓದಿದಲ್ಲಿ ಅವು ಯಜ್ಞದ ಇತರ ಅರ್ಥಗಳನ್ನು ನಮಗೆ ಕೊಡುತ್ತವೆ, ಆದರೆ ಪ್ರಾಣಿಬಲಿ ಎನ್ನುವುದನ್ನು ಎಂದಿಗೂ ಇಲ್ಲ. ಅಂತೆಯೇ ಸಂನ್ಯಾಸ ಎಂಬ ಪದದ ಅರ್ಥ, ಗೀತೆಯಲ್ಲಿ ಬದಲಾವಣೆ ಹೊಂದಿದೆ. ಗೀತೆಯ ಸಂನ್ಯಾಸ ಎಲ್ಲಾ ಚಟುವಟಿಕೆಗಳನ್ನೂ ಸಂಪೂರ್ಣವಾಗಿ ನಿಲ್ಲಿಸುವುದನ್ನು ಸಹಿಸುವುದಿಲ್ಲ. ಗೀತೆಯ ಸಂನ್ಯಾಸ ಪೂರ್ತಿ ಕೆಲಸ, ಆದರೂ ಯಾವುದೇ ಕೆಲಸವಿಲ್ಲದಿರುವಿಕೆ. ಹೀಗೆ ಪದಗಳ ಅರ್ಥಗಳನ್ನು ವಿಸ್ತರಿಸುವ ಮೂಲಕ ಗೀತೆಯ ಕರ್ತೃವು ನಾವು ಅವನನ್ನು ಅನುಸರಿಸುವುದನ್ನು ಹೇಳಿಕೊಡುತ್ತಾನೆ. ಗೀತೆಯ ಅಕ್ಷರಾನುಸಾರ ಯುದ್ಧ ಮತ್ತು ಫಲತ್ಯಾಗ ಪರಸ್ಪರ ಸಂಗತವಾಗಿವೆ ಎಂದು ಹೇಳಲು ಸಾಧ್ಯ ಎನ್ನುವುದನ್ನು ಒಪ್ಪಿಕೊಳ್ಳೋಣ. ಆದರೆ ಗೀತೆಯ ಉಪದೇಶವನ್ನು ನನ್ನ ಸ್ವಂತ ಬದುಕಿನಲ್ಲಿ ಪೂರ್ಣವಾಗಿ ಅನುಸರಿಸುವ ನಲವತ್ತು ವರ್ಷಗಳ ನನ್ನ ಅವಿಚ್ಛಿನ್ನ ಪ್ರಯತ್ನದ ತರುವಾಯ, ಪ್ರತಿಯೊಂದು ರೂಪ ಮತ್ತು ಪ್ರಕಾರದಲ್ಲಿ ಅಹಿಂಸೆಯ ಪರಿಪೂರ್ಣ ಅನುಷ್ಠಾನದ ಹೊರತು ಪರಿಪೂರ್ಣ ತ್ಯಾಗ ಅಸಾಧ್ಯ ಎನ್ನುವುದನ್ನು

ನಾನು ಅತ್ಯಂತ ನಮ್ರತೆಯಿಂದ ಅರಿತಿದ್ದೇನೆ.

21. ಗೀತೆ ಒಂದು ಸೂತ್ರಗ್ರಂಥವಲ್ಲ. ಅದೊಂದು ದೊಡ್ಡ ಧಾರ್ಮಿಕ ಕಾವ್ಯ. ಅದರೊಳಕ್ಕೆ ನೀವು ಹೆಚ್ಚು ಆಳವಾಗಿ ಮುಳುಗಿದಂತೆಲ್ಲಾ, ನೀವು ಹೆಚ್ಚು ಅಮೂಲ್ಯ ಅರ್ಥಗಳನ್ನು ಪಡೆಯುತ್ತೀರಿ. ಅದು . ಜನಸಾಮಾನ್ಯರಿಗಾಗಿ ರಚಿತವಾಗಿರುವುದರಿಂದ, ಅದರಲ್ಲಿ ಹಿತವಾದ ಪುನರುಕ್ತಿ ಇದೆ. ಪ್ರತಿಯುಗವೂ ಅದರ ಪ್ರಮುಖ ಪದಗಳು ಹೊಸ ಮತ್ತು ವಿಸ್ತೃತ ಅರ್ಥಗಳನ್ನು ಹೊಂದಿರುತ್ತವೆ. ಆದರೆ ಅದರ ಕೇಂದ್ರ ಉಪದೇಶ ಎಂದಿಗೂ ವ್ಯತ್ಯಾಸಹೊಂದುವುದಿಲ್ಲ. ಈ ಕೇಂದ್ರಉಪದೇಶವನ್ನು ತನ್ನ ಬದುಕಿನಲ್ಲಿ ಅನುಷ್ಠಾನಕ್ಕೆ ತರಲು ತನಗೆ ಶಕ್ಯವಾಗುವಂತೆ ಸಾಧಕನು ಈ ಭಂಡಾರದಿಂದ ಯಾವುದೇ ಅರ್ಥವನ್ನು ತೆಗೆದುಕೊಳ್ಳಲು ಸ್ವತಂತ್ರನಾಗಿರುತ್ತಾನೆ.

22. ಗೀತೆಯು ವಿಧಿನಿಷೇಧಗಳ ಒಂದು ಸಂಗ್ರಹವೂ ಅಲ್ಲ. ಒಬ್ಬನಿಗೆ ನ್ಯಾಯವಾದುದು ಇನ್ನೊಬ್ಬನಿಗೆ ನ್ಯಾಯಬಾಹಿರವಾಗಬಹುದು. ಒಂದು ಕಾಲದಲ್ಲಿ ಅಥವಾ ಒಂದು ಸ್ಥಳದಲ್ಲಿ ಸಮ್ಮತವಾದುದು ಬೇರೊಂದು ಕಾಲದಲ್ಲಿ ಅಥವಾ ಬೇರೊಂದು ಸ್ಥಳದಲ್ಲಿ ಹಾಗೆ ಆಗದೆ ಹೋಗಬಹುದು. ಫಲಕಾಮನೆಯೊಂದೇ ಸಾರ್ವತ್ರಿಕವಾಗಿ ನಿಷಿದ್ಧವಾದುದು. ನಿಷ್ಕಾಮತೆ ಕರ್ತವ್ಯವಾಗಿದೆ.

23. ಗೀತೆಯು ಜ್ಞಾನದ ಪ್ರಶಂಸೆಯನ್ನು ಒಳಗೊಂಡಿದೆ. ಆದರೆ ಆ ಜ್ಞಾನ ಕೇವಲ ಬುದ್ಧಿಗೆ ಅತೀತವಾದುದು. ಮುಖ್ಯವಾಗಿ ಅದು ಹೃದಯವನ್ನು ಸಂಬೋಧಿಸಿ ಹೇಳಿದ್ದು ಮತ್ತು ಹೃದಯದಿಂದ ಅರ್ಥಮಾಡಿಕೊಳ್ಳುವಂಥದ್ದು. ಆದ್ದರಿಂದ ಗೀತೆ ಶ್ರದ್ಧೆಯಿಲ್ಲದವರಿಗೆ ಅಲ್ಲ. ಗೀತೆಯ ಕರ್ತೃವು ಕೃಷ್ಣನನ್ನು ಹೀಗೆ ಹೇಳುವಂತೆ ಮಾಡುತ್ತಾನೆ:

ತಪಸ್ಸಿಲ್ಲದವನಿಗೆ, ಭಕ್ತಿಯಿಲ್ಲದವನಿಗೆ, ಈ ಉಪದೇಶ ಬೇಕಿಲ್ಲದವನಿಗೆ ಮತ್ತು ನನ್ನನ್ನು ನಿರಾಕರಿಸುವವನಿಗೆ ಈ ನಿಧಿಯನ್ನು ಕೊಡಬೇಡ. ಆದರೆ ಈ ಅಮೂಲ್ಯ ನಿಧಿಯನ್ನು ನನ್ನ ಭಕ್ತರಿಗೆ ಕೊಡುವವರು ಈ ಸೇವೆಯ ಕಾರಣದಿಂದಾಗಿಯೇ ಖಂಡಿತವಾಗಿಯೂ ನನ್ನನ್ನು ತಲುಪುತ್ತಾರೆ. ಯಾರು ಅಸೂಯಾರಹಿತರಾಗಿ, ಭಕ್ತಿಯಿಂದ ಈ ಉಪದೇಶವನ್ನು ಗ್ರಹಿಸುತ್ತಾರೆಯೋ ಅವರು ಮೋಕ್ಷವನ್ನು ಪಡೆದು, ಮರಣಾನಂತರ ಪುಣ್ಯವಂತರು ಹೋಗುವ ಲೋಕದಲ್ಲಿ ಜೀವಿಸುತ್ತಾರೆ.

*ಯಂಗ್ ಇಂಡಿಯಾ*, 6 ಆಗಸ್ಟ್ 1931



29

# ಯರವಾಡಾ ಮಂದಿರದಿಂದ

[ಯರವಾಡ ಸೆರೆಮನೆಯಿಂದ ಗಾಂಧೀಜಿ ಸಬರಮತಿಯ ತಮ್ಮ ಆಶ್ರಮದಲ್ಲಿನ ಸದಸ್ಯರಿಗೆ ಕಳುಹಿಸಿದ ಎರಡು ಉಪನ್ಯಾಸಗಳು ಈ ಮುಂದಿನವು]

ನಾನು ಕಷ್ಟಗಳಿಗೆ ಸಿಕ್ಕಿದಾಗಲೆಲ್ಲಾ ನನ್ನ ತಾಯಿ ಗೀತೆಯ ಬಳಿಗೆ ಓಡುತ್ತೇನೆ ಮತ್ತು ಇದುವರೆಗೆ ಅವಳು ನನಗೆ ಸಮಾಧಾನ ನೀಡಲು ಎಂದೂ ವಿಫಲಳಾಗಿಲ್ಲ. ಗೀತೆಯಿಂದ ಸಮಾಧಾನ ಪಡೆಯುತ್ತಿರುವ ಜನ ನಾನು ದಿನದಿಂದ ದಿನಕ್ಕೆ ಅದನ್ನು ಅರ್ಥಮಾಡಿಕೊಳ್ಳುತ್ತಿರುವ ರೀತಿಯನ್ನು ಅರಿಯುವಂತಾದರೆ ಅವರು ಅದರಿಂದ ಇನ್ನೂ ಹೆಚ್ಚಿನ ನೆರವನ್ನು ಪಡೆಯುವುದು ಮತ್ತು ಅದರಲ್ಲಿ ಸಂಪೂರ್ಣವಾಗಿ ಹೊಸತಾಗಿರುವ ಯಾವುದೋ ಒಂದನ್ನು ಕಾಣುವುದು ಸಾಧ್ಯ.

ಇಂದು ನನಗೆ ಹನ್ನೆರಡನೆಯ ಅಧ್ಯಾಯದ ಸಾರಾಂಶವನ್ನು ಕೊಡಬೇಕೆಂದನಿಸುತ್ತದೆ. ಅದು ಭಕ್ತಿಯೋಗ – ಭಕ್ತಿಯ ಮೂಲಕ ದೇವರನ್ನು ಸಾಕ್ಷಾತ್ಕರಿಸಿಕೊಳ್ಳುವುದು. ಮದುವೆಯ ಸಂದರ್ಭದಲ್ಲಿ ನಾವು ಈ ಅಧ್ಯಾಯವನ್ನು ನೆರವೇರಿಸಬೇಕಾದ ಪಂಚಯಜ್ಞಗಳಲ್ಲಿ ಒಂದನ್ನಾಗಿ ಕಂಠಪಾಠ ಮಾಡಬೇಕೆಂದೂ ಧ್ಯಾನಮಾಡಬೇಕೆಂದೂ ವಧೂವರರಿಗೆ ಹೇಳುತ್ತೇವೆ. ಭಕ್ತಿಯಿಲ್ಲದ ಕರ್ಮ ಮತ್ತು ಜ್ಞಾನಗಳು ನೀರಸ ಹಾಗೂ ಶುಷ್ಕ. ಅವು ಬಂಧನಗಳು ಕೂಡ ಆಗಬಹುದು. ಆದ್ದರಿಂದ ಪ್ರೀತಿತುಂಬಿದ ಹೃದಯದಿಂದ ನಾವು ಗೀತೆಯ ಮೇಲಿನ ಈ ಚಿಂತನೆಯನ್ನು ಪ್ರಾರಂಭಿಸೋಣ.

ಅರ್ಜುನನು ಭಗವಂತನನ್ನು ಕೇಳುತ್ತಾನೆ: "ವ್ಯಕ್ತವನ್ನು ಉಪಾಸನೆ ಮಾಡುವ ಭಕ್ತ ಮತ್ತು ಅವ್ಯಕ್ತವನ್ನು ಉಪಾಸನೆ ಮಾಡುವವ ಇವರಿಬ್ಬರಲ್ಲಿ ಯಾವನು

ಶ್ರೇಷ್ಠ?" ಉತ್ತರವಾಗಿ ಭಗವಂತನು ಹೇಳುತ್ತಾನೆ: "ಯಾರು ಪೂರ್ಣಶ್ರದ್ಧೆಯಿಂದ ವ್ಯಕ್ತವನ್ನು ಧ್ಯಾನಿಸಿ ನನ್ನಲ್ಲಿ ತಾವು ಲೀನವಾಗುತ್ತಾರೆಯೋ ಆ ಶ್ರದ್ಧಾಳುಗಳು ನನ್ನ ಭಕ್ತರು. ಆದರೆ ಯಾರು ಅವ್ಯಕ್ತವನ್ನು ಉಪಾಸನೆ ಮಾಡುತ್ತಾರೆಯೋ, ಹಾಗೆ ಮಾಡಲು ಅವರ ಇಂದ್ರಿಯಗಳೆಲ್ಲವನ್ನೂ ನಿಗ್ರಹಿಸುತ್ತಾರೆಯೋ, ಯಾರನ್ನೂ ಮೇಲೆ ಅಥವಾ ಕೀಳು ಎಂದು ಪರಿಗಣಿಸದೆ ಎಲ್ಲರನ್ನೂ ಸಮಾನವಾಗಿ ಕಂಡು ಸೇವೆ ಮಾಡುತ್ತಾರೆಯೋ ಅವರು ಕೂಡ ನನ್ನ ಸಾಕ್ಷಾತ್ಕಾರ ಪಡೆಯುತ್ತಾರೆ."

ಆದ್ದರಿಂದ ಒಬ್ಬನು ಇನ್ನೊಬ್ಬನಿಗಿಂತ ಉತ್ತಮನೆಂದು ಸಾಧಿಸಲಾಗುವುದಿಲ್ಲ. ಆದರೆ ದೇಹಧಾರಿಯಾದ ವ್ಯಕ್ತಿಗೆ ಅವ್ಯಕ್ತವನ್ನು ಸಂಪೂರ್ಣವಾಗಿ ಗ್ರಹಿಸಿ ಆರಾಧಿಸುವುದು ಅಸಾಧ್ಯ ಎಂದು ಎಣಿಸಬಹುದು. ಅವ್ಯಕ್ತವು ನಿರ್ಗುಣ ಮತ್ತು ಮಾನವ ದೃಷ್ಟಿಗೆ ಮೀರಿದುದು. ಆದ್ದರಿಂದ ದೇಹ ಹೊತ್ತ ಎಲ್ಲಾ ವ್ಯಕ್ತಿಗಳೂ ಜ್ಞಾನಪೂರ್ವಕವಾಗಿಯೋ ಜ್ಞಾನರಹಿತವಾಗಿಯೋ ವ್ಯಕ್ತದ ಭಕ್ತರು.

ಭಗವಂತನು ಹೇಳುತ್ತಾನೆ: "ಆದ್ದರಿಂದ ರೂಪವಿರುವ ನನ್ನ ವಿಶ್ವಾತ್ಮಕ ಶರೀರದಲ್ಲಿ ನಿನ್ನ ಮನಸ್ಸನ್ನು ಲೀನಗೊಳಿಸು. ನಿನ್ನ ಸರ್ವಸ್ವವನ್ನು ಅವನ ಚರಣಗಳಲ್ಲಿ ಸಮರ್ಪಿಸು. ಆದರೆ ನಿನಗೆ ಇದನ್ನು ಮಾಡಲಾಗದಿದ್ದರೆ, ನಿನ್ನ ಮನಸ್ಸಿನ ರಾಗದ್ವೇಷಗಳನ್ನು ನಿಯಂತ್ರಿಸಲು ಅಭ್ಯಾಸಮಾಡು. ಪ್ರಾಣಾಯಾಮ, ಆಸನ ಮತ್ತು ಇತರ ಅಭ್ಯಾಸಗಳ ನೆರವಿನೊಡನೆ ಯಮನಿಯಮಗಳನ್ನು ಪಾಲಿಸುವ ಮೂಲಕ ಮನಸ್ಸನ್ನು ಹತೋಟಿಗೆ ತಂದುಕೋ. ನಿನಗೆ ಹೀಗೆ ಮಾಡಲಾಗದಿದ್ದರೆ, ಯಾವುದೇ ಕೆಲಸವನ್ನು ನೀನು ಕೈಗೊಂಡರೂ ಅದನ್ನು ನೀನು ನನಗೋಸ್ಕರ ಮಾಡುತ್ತೀಯೆ ಎಂಬುದನ್ನು ಮನಸ್ಸಿನಲ್ಲಿಟ್ಟುಕೊಂಡು ತರುವಾಯ ನಿನ್ನ ಎಲ್ಲ ಕೆಲಸಗಳನ್ನೂ ಮಾಡು. ಈ ರೀತಿಯಲ್ಲಿ ನಿನ್ನ ಎಲ್ಲ ಪ್ರಾಪಂಚಿಕ ವ್ಯಾಮೋಹಗಳೂ ಆಸಕ್ತಿಗಳೂ ಅಳಿದುಹೋಗುತ್ತವೆ ಮತ್ತು ಕ್ರಮವಾಗಿ ನೀನು ಕಲಂಕರಹಿತನೂ ಪರಿಶುದ್ಧನೂ ಆಗುತ್ತೀಯೆ. ಪ್ರೇಮದ ಚಿಲುಮೆ ನಿನ್ನಲ್ಲಿ ಏಳುತ್ತದೆ. ಆದರೆ ನಿನಗೆ ಇದನ್ನೂ ಮಾಡಲಾಗದಿದ್ದರೆ, ನಿನ್ನ ಎಲ್ಲಾ ಕ್ರಿಯೆಗಳ ಫಲವನ್ನು ತ್ಯಾಗಮಾಡು. ಅನಂತರ ನಿನ್ನ ಕೆಲಸದ ಫಲಗಳಿಗೆ ಹಾತೊರೆಯಬೇಡ. ನಿನ್ನ ಪಾಲಿಗೆ ಬಂದ ಕೆಲಸವನ್ನು ಯಾವಾಗಲೂ ಮಾಡು. ಮನುಷ್ಯ ತನ್ನ ಕೆಲಸದ ಫಲಗಳ ಮೇಲೆ ಅಧಿಕಾರ ಹೊಂದಿರಲಾರ. ಕೆಲಸದ ಫಲವನ್ನು ರೂಪಿಸುವ ಕಾರಣಗಳು ಒಟ್ಟುಗೂಡಿದ ತರುವಾಯ ಮಾತ್ರವೇ ಅದು ಉದಯಿಸುತ್ತದೆ. ಆದ್ದರಿಂದ ನೀನು ನಿಮಿತ್ತ ಮಾತ್ರ ಆಗು. ನಾನು ನಿನಗೆ ತೋರಿಸಿರುವ ನಾಲ್ಕು ವಿಧಾನಗಳಲ್ಲಿ ಯಾವುದೇ ಒಂದನ್ನು

ಉತ್ತಮವೆಂದಾಗಲಿ ಕೀಳೆಂದಾಗಲಿ ಪರಿಗಣಿಸಬೇಡ. ಅವುಗಳಲ್ಲಿ ಯಾವುದು ನಿನಗೆ ಸೂಕ್ತವಾಗಿದೆಯೋ ಅದನ್ನು ನಿನ್ನ ಭಕ್ತಿಯ ಅನುಷ್ಠಾನಕ್ಕೆ ಬಳಸಿಕೊ.

"ನಾನು ಹೇಳಿದ ಯಮ, ನಿಯಮ, ಪ್ರಾಣಾಯಾಮ ಮತ್ತು ಆಸನದ ಮಾರ್ಗಕ್ಕಿಂತಲೂ ಶ್ರವಣ, ಮನನ ಮತ್ತು ಅರ್ಥಗ್ರಹಣದ ಮಾರ್ಗ ಹೆಚ್ಚು ಸುಲಭವಾಗಿರುವಂತೆ ಕಾಣುತ್ತದೆ. ಅದಕ್ಕಿಂತ ಸುಲಭವಾದುದು ಚಿತ್ತೈಕಾಗ್ರತೆ ಮತ್ತು ಆರಾಧನೆ. ಚಿತ್ತೈಕಾಗ್ರತೆಗಿಂತ ಇನ್ನೂ ಸುಲಭವಾದುದು ಕರ್ಮಫಲಗಳ ತ್ಯಾಗ. ಒಂದೇ ವಿಧಾನ ಎಲ್ಲರಿಗೂ ಸಮಾನವಾಗಿ ಸುಲಭವಾಗಿರಲಾರದು. ಕೆಲವರು ಸಹಾಯಕ್ಕಾಗಿ ಈ ಎಲ್ಲ ವಿಧಾನಗಳನ್ನೂ ಆಶ್ರಯಿಸಬೇಕಾಗಬಹುದು. ಖಂಡಿತವಾಗಿ ಅವು ಪರಸ್ಪರ ಮಿಶ್ರಿತವಾಗಿವೆ. ಏನೇ ಇರಲಿ ನೀನು ಒಬ್ಬ ಭಕ್ತನಾಗಬೇಕೆಂದು ಇಚ್ಛಿಸುತ್ತೀಯೆ. ಆ ಗುರಿಯನ್ನು ನಿನಗೆ ಸಾಧ್ಯವಾಗುವ ಯಾವುದೇ ವಿಧಾನದಿಂದ ಸಾಧಿಸು. ಯಾರನ್ನು ನಿಜವಾದ ಭಕ್ತನೆಂದು ಎಣಿಸಬೇಕು ಎಂಬುದನ್ನು ನಿನಗೆ ತಿಳಿಸುವುದು ಮಾತ್ರ ನನ್ನ ಕೆಲಸ. ಭಕ್ತ ಯಾರನ್ನೂ ದ್ವೇಷಿಸುವುದಿಲ್ಲ, ಯಾರ ಬಗ್ಗೆಯೂ ಅಸೂಯೆ ಹೊಂದಿರುವುದಿಲ್ಲ, ಎಲ್ಲಾ ಪ್ರಾಣಿಗಳ ಸಂಗಡವೂ ಸ್ನೇಹದಿಂದಿರುತ್ತಾನೆ ಮತ್ತು ಎಲ್ಲರಿಗೂ ದಯೆ ತೋರುತ್ತಾನೆ. ಇದನ್ನು ಸಾಧಿಸಲು ಅವನು ಎಲ್ಲಾ ಸ್ವಂತ ಆಸಕ್ತಿಗಳನ್ನು ತೊರೆಯುತ್ತಾನೆ; ಅವನ ಅಹಂಕಾರ ಲಯವಾಗಿರುತ್ತದೆ; ಅವನು ಏನೂ ಅಲ್ಲದವನಂತೆ ಆಗುತ್ತಾನೆ; ಅವನಿಗೆ ಸುಖ ಮತ್ತು ದುಃಖ ಒಂದೇ; ತನ್ನ ತಪ್ಪುಗಳಿಗೆ ಪ್ರಪಂಚದಿಂದ ಕ್ಷಮೆಗಾಗಿ ಅವನು ಹಂಬಲಿಸುವಂತೆಯೆ ತನಗೆ ಅಪರಾಧ ಮಾಡುವವರನ್ನು ಅವನು ಕ್ಷಮಿಸುತ್ತಾನೆ; ಅವನು ತೃಪ್ತಿಯಿಂದ ಇರುತ್ತಾನೆ; ತನ್ನ ಒಳ್ಳೆಯ ಸಂಕಲ್ಪಗಳಲ್ಲಿ ದೃಢವಾಗಿರುತ್ತಾನೆ; ಇತರರಿಂದ ಯಾವ ತೊಂದರೆ ಅಥವಾ ಭಯವನ್ನು ಸ್ವತಃ ಕಾಣದಿರುವುದರಿಂದ ಅವನು ಇತರರಿಗೆ ತೊಂದರೆ ಅಥವಾ ಭಯ ಉಂಟುಮಾಡುವುದಿಲ್ಲ. ನನ್ನ ಭಕ್ತ ಹರ್ಷಶೋಕಗಳಿಂದ, ನೋವುನಲಿವುಗಳಿಂದ ಮುಕ್ತನಾಗಿರುತ್ತಾನೆ. ಅವನಿಗೆ ಯಾವುದೇ ಆಸೆಗಳಿರುವುದಿಲ್ಲ. ಅವನು ಶುದ್ಧ, ಕುಶಲ ಮತ್ತು ವಿವೇಕಿ. ಮಹತ್ವಾಕಾಂಕ್ಷೆಯ ಎಲ್ಲಾ ಉದ್ಯಮಗಳನ್ನೂ ಅವನು ತ್ಯಜಿಸಿದ್ದಾನೆ. ಅವನು ತನ್ನ ಸಂಕಲ್ಪಗಳಿಗೆ ಬದ್ಧನಾಗಿರುತ್ತಾನೆ. ಅವುಗಳ ಸತ್ಫಲ ಅಥವಾ ದುಷ್ಫಲಗಳನ್ನು ತ್ಯಜಿಸುತ್ತಾನೆ. ಅವನು ಅನಾಸಕ್ತನಾಗಿರುತ್ತಾನೆ. ಅಂಥವನಿಗೆ ಶತ್ರುಗಳಾಗಲಿ ಮಿತ್ರರಾಗಲಿ ಇರುವುದಿಲ್ಲ. ಅವನು ಮಾನ ಅಥವಾ ಅಪಮಾನವನ್ನು ಮೀರಿರುತ್ತಾನೆ.

"ಶಾಂತಿ ಮತ್ತು ಮೌನದಲ್ಲಿ, ತನಗೆ ಸಿಕ್ಕಿದ್ದರಿಂದ ತೃಪ್ತನಾಗಿ, ಅವನು

ಏಕಾಂತದಲ್ಲಿ ಅಂತರ್ಮುಖಿಯಾಗಿ ಜೀವಿಸುತ್ತಾನೆ. ಅವನ ಸುತ್ತಲೂ ಏನೇ ಆಗುತ್ತಿರಲಿ ಅವನು ಯಾವಾಗಲೂ ಶಾಂತಚಿತ್ತನಾಗಿರುತ್ತಾನೆ. ಈ ರೀತಿ ಶ್ರದ್ಧಾಪೂರ್ಣನಾಗಿ ಯಾವನು ಜೀವಿಸುತ್ತಾನೆಯೋ ಅವನು ನನಗೆ ಅತ್ಯಂತ ಪ್ರಿಯನಾದ ಭಕ್ತನಾಗಿರುತ್ತಾನೆ".

*ಯಂಗ್ ಇಂಡಿಯಾ*. 13 ನವೆಂಬರ್ 1930



# 30

# ಗೀತೆಯ ಪಾಠಕರು

ಗೀತೆ ನನಗೆ ಯಾವ ಪ್ರಾಮುಖ್ಯ ಹೊಂದಿದೆ ಎನ್ನುವುದನ್ನು ಹರಿಜನದ ಓದುಗರು ಅರಿತಿದ್ದಾರೆ. ಗೀತೆಯಂಥ ಗ್ರಂಥಗಳನ್ನು ಕಂಠಪಾಠ ಮಾಡುವುದು ಬಹಳ ಅಪೇಕ್ಷಣೀಯವಾದ ಒಂದು ವಿಷಯ ಎಂದು ನಾನು ಯಾವಾಗಲೂ ಪರಿಗಣಿಸಿದ್ದೇನೆ. ಆದರೆ ನಾನು ಅನೇಕಸಲ ಪ್ರಯತ್ನಪಟ್ಟರೂ ಗೀತೆಯ ಎಲ್ಲಾ ಅಧ್ಯಾಯಗಳನ್ನು ಬಾಯಿಪಾಠ ಮಾಡಲು ನನಗೇ ಶಕ್ಯವಾಗಲಿಲ್ಲ. ಬಾಯಿಪಾಠ ಮಾಡುವುದರಲ್ಲಿ ನಾನು ದಡ್ಡ ಎನ್ನುವುದು ನನಗೆ ಗೊತ್ತಿದೆ. ಆದ್ದರಿಂದ ಗೀತೆಯನ್ನು ಕಂಠಸ್ಥ ಮಾಡಿಕೊಂಡಿರುವ ಯಾರನ್ನಾದರೂ ನಾನು ಸಂಧಿಸಿದರೆ, ಅವನಿಗೆ ಅಥವಾ ಅವಳಿಗೆ ನನ್ನ ಗೌರವ ಸಲ್ಲುತ್ತದೆ. ತಮಿಳುನಾಡಿನ ಪ್ರವಾಸದಲ್ಲಿ ನಾನು ಅಂಥ ಇಬ್ಬರನ್ನು – ಮಧುರೆಯಲ್ಲಿ ಒಬ್ಬ ಮಹನೀಯ ಮತ್ತು ದೇವಕೊಟ್ಟದಲ್ಲಿ ಒಬ್ಬ ಮಹಿಳೆ – ಈಗಾಗಲೇ ಸಂಧಿಸಿದ್ದೇನೆ. ಮಧುರೆಯ ಮಹನೀಯ ಒಬ್ಬ ಅಪ್ರಸಿದ್ಧ ವ್ಯಾಪಾರಿ. ಮಹಿಳೆ ಪಾರ್ವತಿಬಾಯಿ, ದಿವಂಗತ ನ್ಯಾಯಮೂರ್ತಿ ಸದಾಶಿವ ಐಯ್ಯರರ ಮಗಳು. ತಾವು ಜೀವಿಸಿದ್ದಾಗಲೇ ಐಯ್ಯರು ಗೀತೆಯನ್ನು ನೆನಪಿನಿಂದ ಉತ್ಕೃಷ್ಟವಾಗಿ ಪಠಿಸುವ ವ್ಯಕ್ತಿಗೆ ಒಂದು ವಾರ್ಷಿಕ ಬಹುಮಾನವನ್ನು ಇಟ್ಟಿದ್ದರು. ಆದರೆ ಕೇವಲ ಪಠನ ಸ್ವತಃ ಒಂದು ಗುರಿಯಲ್ಲ ಎಂಬುದನ್ನು ಪಾಠಕರು ಅರಿಯಬೇಕು ಎನ್ನುವುದು ನನ್ನ ಅಪೇಕ್ಷೆ. ಅದು ಗೀತೆಯ ಅರ್ಥವನ್ನು ಮತ್ತು ಸಂದೇಶವನ್ನು ಚಿಂತಿಸಲು ಮತ್ತು ಮೈಗೂಡಿಸಿಕೊಳ್ಳಲು ಒಂದು ಸಾಧನವಾಗಬೇಕು. ತಾಳ್ಮೆಯಿಂದ ಒಂದು ಗಿಣಿಗೆ ಕೂಡ ಅದನ್ನು ಬಾಯಿಪಾಠ ಮಾಡಿ ಹೇಳಲು ಕಲಿಸಬಹುದು. ಆದರೆ ಆ

ಪತನದಿಂದ ಅವನು ಹೆಚ್ಚೇನನ್ನೂ ತಿಳಿದುಕೊಂಡಂತೆ ಆಗುವುದಿಲ್ಲ. ಗೀತೆಯ ಪಾಠಕನು ಅದರ ಕರ್ತೃ ಅವನನ್ನು ಏನಾಗಬೇಕೆಂದು ನಿರೀಕ್ಷಿಸುತ್ತಾನೆಯೋ – ವಿಶಾಲವಾದ ಅರ್ಥದಲ್ಲಿ ಯೋಗಿ – ಅದಾಗಬೇಕು. ಗೀತೆಯು ಅದರ ಭಕ್ತರಿಂದ ಪ್ರತಿಯೊಂದು ಆಲೋಚನೆ, ಮಾತು ಮತ್ತು ಕಾರ್ಯಗಳಲ್ಲಿ ಸಮತೆಯನ್ನು ಮತ್ತು ಈ ಮೂರರ ನಡುವೆ ಸಂಪೂರ್ಣ ಸಾಮರಸ್ಯವನ್ನು ಅಪೇಕ್ಷಿಸುತ್ತದೆ. ಯಾವನ ಮಾತು ಮತ್ತು ಕ್ರಿಯೆ ಅವನ ಆಲೋಚನೆಗಳ ಸಂಗಡ ಸಂಗತವಾಗಿರುವುದಿಲ್ಲವೋ ಅವನು ಒಬ್ಬ ಠಕ್ಕ ಅಥವಾ ಆಷಾಢಭೂತಿ.

*ಹರಿಜನ*, 2 ಫೆಬ್ರವರಿ 1934



# 31

# ಗೀತೆಯ ಆದರ್ಶ

[ಸಬರಮತಿ ಆಶ್ರಮದ ನಿವಾಸಿಗಳನ್ನು ಉದ್ದೇಶಿಸಿ ಗಾಂಧೀಜಿ ಹೇಳಿದರು]

ನಾನು ಗೀತೆಯ ಒಬ್ಬ ಭಕ್ತ ಮತ್ತು ಕರ್ಮದ ಕಠೋರಶಾಸನದಲ್ಲಿ ದೃಢನಂಬಿಕೆಯುಳ್ಳವ. ಅತ್ಯಂತ ಸ್ವಲ್ಪ ಬೀಳುವುದಕ್ಕಾಗಲಿ ಎಡವುದಕ್ಕಾಗಲಿ ಕಾರಣವಿಲ್ಲದೆ ಇಲ್ಲ. ಆಲೋಚನೆ, ಮಾತು ಮತ್ತು ಕ್ರಿಯೆಗಳಲ್ಲಿ ಗೀತೆಯನ್ನು ಅನುಸರಿಸಲು ಪ್ರಯತ್ನಿಸಿದ ವ್ಯಕ್ತಿಗೆ ಯಾವುದೇ ಬೇನೆ ಏಕೆ ಬರಬೇಕು ಎಂದು ನಾನು ಆಶ್ಚರ್ಯಪಟ್ಟಿದ್ದೇನೆ. ಅಧಿಕ ರಕ್ತದೊತ್ತಡದ ಈ ತೊಂದರೆ ಸಂಪೂರ್ಣವಾಗಿ ಮಾನಸಿಕ ಶ್ರಮದ ಮತ್ತು ಚಿಂತೆಯ ಪರಿಣಾಮ ಎಂದು ವೈದ್ಯರು ನನಗೆ ಭರವಸೆ ನೀಡಿದ್ದಾರೆ. ಅದು ನಿಜವಾದಲ್ಲಿ ನಾನು ಪ್ರಾಯಶಃ ಅನಗತ್ಯವಾಗಿ ಕ್ಲೇಶಪಡುತ್ತಿದ್ದೇನೆ, ಅನಗತ್ಯವಾಗಿ ಸಿಡಿಮಿಡಿಗೊಳ್ಳುತ್ತಿದ್ದೇನೆ ಮತ್ತು ಕೋಪ, ಕಾಮ ಮುಂತಾದ ಭಾವೋದ್ರೇಕಗಳಿಗೆ ರಹಸ್ಯವಾಗಿ ಆಶ್ರಯ ಕೊಡುತ್ತಿದ್ದೇನೆ. ಯಾವುದೇ ಸಂಗತಿ ಅಥವಾ ಘಟನೆ, ನನ್ನ ಗಂಭೀರ ಪ್ರಯತ್ನಗಳಿಗೆ ವಿರುದ್ಧವಾಗಿ, ನನ್ನ ಮಾನಸಿಕ ಸಮತೋಲವನ್ನು ಕೆಡಿಸಿದರೂ ಅದು ಗೀತೆಯ ಆದರ್ಶ, ದೋಷಯುಕ್ತ ಎನ್ನುವುದನ್ನು ಸೂಚಿಸದೆ, ಅದರ ಬಗ್ಗೆ ನನ್ನ ಭಕ್ತಿ ದೋಷಯುಕ್ತ ಎನ್ನುವುದನ್ನು ಸೂಚಿಸುತ್ತದೆ. ಗೀತೆಯ ಆದರ್ಶ ಎಲ್ಲಾ ಕಾಲಕ್ಕೂ ಸತ್ಯ. ಅದನ್ನು ನಾನು ಅರ್ಥಮಾಡಿಕೊಂಡಿರುವುದು ಮತ್ತು ಅದನ್ನು ನಾನು ಪಾಲಿಸುತ್ತಿರುವುದು ದೋಷಗಳಿಂದ ತುಂಬಿದೆ.

ಹರಿಜನ, 29 ಫೆಬ್ರುವರಿ 1936

ಗುರಿ ಸದಾ ಹಿಂದಕ್ಕೆ ಸರಿಯುತ್ತಿರುತ್ತದೆ. ಮುನ್ನಡೆ ಹೆಚ್ಚಾದಷ್ಟೂ ನಮ್ಮ ಅನರ್ಹತೆಯ ಅರಿವು ಹೆಚ್ಚುತ್ತದೆ. ತೃಪ್ತಿ ಇರುವುದು ಪ್ರಯತ್ನದಲ್ಲಿ, ಸಿದ್ಧಿಯಲ್ಲಲ್ಲ. ಪೂರ್ಣಪ್ರಯತ್ನವು ಪೂರ್ಣವಿಜಯವಾಗಿರುತ್ತದೆ.

*ಯಂಗ್ ಇಂಡಿಯಾ*, 9 ಮಾರ್ಚ್ 1922



# 32

# ಅಹಿಂಸೆ

ತಾನು ಅಹಿಂಸಾವಾದಿಯೆಂದು ಹೇಳಿಕೊಳ್ಳುವ ವ್ಯಕ್ತಿಯೊಬ್ಬನಿಗೆ ಯಾರಾದರೂ ಕೆಡುಕು ಮಾಡಿದರೆ ಅಂತಹವನ ಮೇಲೆ ಅವನು ಕೋಪ ಮಾಡಿಕೊಳ್ಳಕೂಡದೆಂದು ನಿರೀಕ್ಷಿಸಲಾಗುತ್ತದೆ. ಅವನು ತನಗೆ ಕೆಡುಕು ಮಾಡಿದವರಿಗೆ ಹಾನಿ ಬಯಸುವುದಿಲ್ಲ. ಬದಲಾಗಿ ಅವನಿಗೆ ಒಳ್ಳೆಯದನ್ನೆ ಬಯಸುತ್ತಾನೆ; ಅವನು ಅವನನ್ನು ಬಯ್ಯುದಿಲ್ಲ; ಅವನು ಅವನಿಗೆ ಯಾವುದೇ ದೈಹಿಕ ನೋವುಂಟುಮಾಡುವುದಿಲ್ಲ. ಅನ್ಯಾಯದವನು ಮಾಡುವ ತೊಂದರೆಯೆಲ್ಲವನ್ನೂ ಅವನು ಸಹಿಸಿಕೊಳ್ಳುತ್ತಾನೆ. ಹೀಗೆ ಅಹಿಂಸೆಯು ಸಂಪೂರ್ಣ ಪಾಪರಾಹಿತ್ಯ ವಾಗಿರುತ್ತದೆ. ಸಂಪೂರ್ಣ ಅಹಿಂಸೆಯು ಜೀವಿಸುವ ಎಲ್ಲದರ ವಿರುದ್ಧ ಸಂಪೂರ್ಣ ದ್ವೇಷರಾಹಿತ್ಯವಾಗಿರುತ್ತದೆ. ಆದ್ದರಿಂದ ಅದು ಕೇಡುಂಟುಮಾಡುವ ಕ್ರಿಮಿಗಳನ್ನು ಅಥವಾ ಪ್ರಾಣಿಗಳನ್ನು ಹೊರತು ಪಡಿಸದೆ ಮಾನವನಿಗಿಂತ ಕೆಳದರ್ಜೆಯ ಜೀವಿಯನ್ನು ಕೂಡ ಒಳಗೊಳ್ಳುತ್ತದೆ. ನಮ್ಮ ವಿನಾಶಕಾರಿ ಪ್ರವೃತ್ತಿಗಳನ್ನು ಪೋಷಿಸಲು ಅವುಗಳನ್ನು ಸೃಷ್ಟಿಸಿಲ್ಲ. ಸೃಷ್ಟಿಕರ್ತನ ಮನಸ್ಸನ್ನು ನಾವು ಅರಿತರೆ ಮಾತ್ರ ಅವನ ಸೃಷ್ಟಿಯಲ್ಲಿ ಅವುಗಳ ಯುಕ್ತ ಸ್ಥಾನವನ್ನು ನಾವು ಕಂಡುಕೊಳ್ಳುತ್ತೇವೆ. ಆದ್ದರಿಂದ ಅಹಿಂಸೆ ಅದರ ಸಕ್ರಿಯರೂಪದಲ್ಲಿ ಜೀವಕೋಟಿಯೆಲ್ಲದರ ಬಗ್ಗೆ ಸದ್ಭಾವನೆಯಾಗಿದೆ. ಅದು ಪರಿಶುದ್ಧವಾದ ಪ್ರೇಮ. ನಾನು ಅದನ್ನು ಹಿಂದೂಧರ್ಮಗ್ರಂಥಗಳಲ್ಲಿ, ಬೈಬಲಿನಲ್ಲಿ, ಕುರಾನಿನಲ್ಲಿ ಓದಿರುತ್ತೇನೆ.

ಅಹಿಂಸೆ ಒಂದು ಪರಿಪೂರ್ಣವಾದ ಸ್ಥಿತಿ. ಇಡೀ ಮಾನವಕುಲವು ಅಪ್ರಜ್ಞಾಪೂರ್ವಕವಾಗಿಯೇ ಆಗಲಿ ಸಹಜವಾಗಿ ಸರಿಯುತ್ತಿರುವ ಗುರಿ ಅದು.

ಮನುಷ್ಯ ಸ್ವತಃ ನಿಷ್ಪಾಪ ಮೂರ್ತಿಯಾದಾಗ ದೈವಿಕವಾಗುವುದಿಲ್ಲ. ಆಗ ಮಾತ್ರ ಅವನು ನಿಜವಾಗಿ ಮನುಷ್ಯನಾಗುತ್ತಾನೆ. ನಮ್ಮ ಸದ್ಯದ ಸ್ಥಿತಿಯಲ್ಲಿ ನಾವು ಭಾಗಶ: ಮನುಷ್ಯರು ಮತ್ತು ಭಾಗಶಃ ಪ್ರಾಣಿಗಳು ಆಗಿರುತ್ತೇವೆ. ನಾವು ಏಟಿಗೆ ಏಟು ಹಾಕಿ ಆ ಕಾರ್ಯಕ್ಕೆ ಬೇಕಾದ ಕೋಪದ ಪ್ರಮಾಣವನ್ನು ಬೆಳೆಸಿಕೊಂಡಾಗ ನಮ್ಮ ಮಾನವಕುಲದ ಉದ್ದೇಶವನ್ನು ನಿಜವಾಗಿ ಪೂರೈಸುತ್ತಿದ್ದೇವೆ ಎಂದು ನಮ್ಮ ಅಜ್ಞಾನ ಮತ್ತು ದುರಹಂಕಾರದಿಂದ ಕೂಡ ಹೇಳುತ್ತೇವೆ. ಪ್ರತೀಕಾರ ನಮ್ಮ ಬದುಕಿನ ನಿಯಮ ಎಂದು ನಾವು ನಂಬಿರುವಂತೆ ನಟಿಸುತ್ತೇವೆ. ಆದರೆ ಪ್ರತಿಯೊಂದು ಧರ್ಮಗ್ರಂಥದಲ್ಲಿಯೂ ಪ್ರತೀಕಾರವು ಅಂಗೀಕಾರಾರ್ಹ ಮಾತ್ರ ಆಗಿದೆಯೇ ವಿನಾ ಎಲ್ಲಿಯೂ ಅದು ಕರ್ತವ್ಯ ಆಗಿಲ್ಲದಿರುವುದನ್ನು ನಾವು ನೋಡುತ್ತೇವೆ. ಕರ್ತವ್ಯವಾಗಿರುವುದು ಸಂಯಮ. ಪ್ರತೀಕಾರವು ವ್ಯಾಪಕವಾಗಿ ನಿಯಂತ್ರಿಸಬೇಕಾದ ಒಂದು ಕಾರ್ಯ. ಸಂಯಮ ನಮ್ಮ ಅಸ್ತಿತ್ವದ ಒಂದು ನಿಯಮ. ಏಕೆಂದರೆ, ಅತ್ಯುನ್ನತ ಪರಿಪೂರ್ಣತೆಯನ್ನು ಅತ್ಯುನ್ನತ ಸಂಯಮವಿಲ್ಲದೆ ಪಡೆಯಲಾಗದು. ಹೀಗೆ, ಸಂಕಟ ಅನುಭವಿಸುವುದು ಮಾನವಕುಲದ ಲಕ್ಷಣ.



# 33

# ಹಿಂದೂ–ಮುಸ್ಲಿಂ ವೈಷಮ್ಯ

## ಅದಕ್ಕೆ ಕಾರಣಗಳು ಮತ್ತು ಪರಿಹಾರ

ನಾನು ಹಿಂದೂಧರ್ಮಕ್ಕೆ ಸೇರಿದವನು ಎಂದು ಹೇಳಿಕೊಳ್ಳುವುದನ್ನು ಕೆಲವರು ನಿರಾಕರಿಸುತ್ತಾರೆ, ಏಕೆಂದರೆ ಅಹಿಂಸೆಯನ್ನು ಅದರ ಅತ್ಯಂತ ತೀವ್ರ ರೂಪದಲ್ಲಿ ನಾನು ನಂಬುತ್ತೇನೆ ಮತ್ತು ಸಮರ್ಥಿಸುತ್ತೇನೆ ಎಂದು. ನಾನು ವೇಷ ಮರಸಿಕೊಂಡ ಕ್ರೈಸ್ತ ಎಂದು ಅವರು ಹೇಳುತ್ತಾರೆ. ಆ ಮಹಾಕವನದ ಉಪದೇಶ ಅನ್ಯ ಮಿಶ್ರಣವಿಲ್ಲದ ಶುದ್ಧ ಅಹಿಂಸೆ ಎಂದು ನಾನು ಹೇಳುವಾಗ ನಾನು ಗೀತೆಯ ಅರ್ಥವನ್ನು ವಿಕೃತಗೊಳಿಸುತ್ತೇನೆಂದು ಕೂಡ ನನಗೆ ಗಂಭೀರವಾಗಿ ತಿಳಿಸಲಾಗಿದೆ. ಕೆಲವು ಸಂದರ್ಭಗಳಲ್ಲಿ ಕೊಲ್ಲುವುದು ಸಹ ಒಂದು ಕರ್ತವ್ಯ ಎಂದು ಗೀತೆ ವಿಧಿಸಿದೆ ಎಂದು ನನ್ನ ಕೆಲವು ಹಿಂದೂ ಮಿತ್ರರು ನನಗೆ ಹೇಳುತ್ತಾರೆ. ಬಹಳ ಓದಿರುವ ಶಾಸ್ತ್ರಿಗಳೊಬ್ಬರು ಇತ್ತೀಚೆಗಷ್ಟೇ ನನ್ನ ಗೀತಾವ್ಯಾಖ್ಯಾನವನ್ನು ತಿರಸ್ಕಾರದಿಂದ ತಳ್ಳಿಹಾಕಿದರು. ಗೀತೆಯು ದುಷ್ಟ ಮತ್ತು ಒಳ್ಳೆಯ ಶಕ್ತಿಗಳ ನಡುವಣ ನಿರಂತರ ಹೋರಾಟವನ್ನು ನಿರೂಪಿಸುತ್ತದೆ ಮತ್ತು ನಮ್ಮೊಳಗಿರುವ ಕೇಡನ್ನು ಹಿಂಜರಿಯದೆ, ದಯೆದಾಕ್ಷಿಣ್ಯವಿಲ್ಲದೆ ಮೂಲೋತ್ಪಾಟನೆ ಮಾಡುವ ಕರ್ತವ್ಯವನ್ನು ಬೋಧಿಸುತ್ತದೆ ಎಂದು ಕೆಲವು ವ್ಯಾಖ್ಯಾನಕಾರರು ಹೊಂದಿರುವ ಅಭಿಪ್ರಾಯಕ್ಕೆ ಯಾವುದೇ ಆಧಾರವಿಲ್ಲ ಎಂದು ಅವರು ಹೇಳಿದರು.

ಅಹಿಂಸೆಗೆ ವಿರುದ್ಧವಾದ ಈ ಅಭಿಪ್ರಾಯಗಳನ್ನು ನಾನು ವಿವರವಾಗಿ ನಿರೂಪಿಸುತ್ತಿರುವುದಕ್ಕೆ ಕಾರಣ, ನಾನು ನೀಡಬೇಕಾಗಿರುವ ಪರಿಹಾರವನ್ನು ನಾವು ಅರ್ಥಮಾಡಕೊಳ್ಳಬೇಕಾದರೆ ಈ ಅಭಿಪ್ರಾಯಗಳನ್ನು ಅರ್ಥ ಮಾಡಿಕೊಳ್ಳುವುದು ಆವಶ್ಯಕ.

ಆದ್ದರಿಂದ ಇಂದು ನನ್ನ ಸುತ್ತಲೂ ನಾನು ಕಾಣುತ್ತಿರುವುದು ಅಹಿಂಸೆಯ ಪ್ರಸರಣದ ವಿರುದ್ಧ ಒಂದು ಪ್ರತಿಭಟನೆಯನ್ನು, ಹಿಂಸೆಯ ಅಲೆ ಬರುತ್ತಿರುವುದು ನನಗೆ ಅರಿವಾಗುತ್ತಿದೆ. ಹಿಂದೂ–ಮುಸ್ಲಿಂ ಬಿಕ್ಕಟ್ಟು ಈ ಬೇಸರದ ಒಂದು ಉತ್ಕಟಸ್ಥಿತಿ.

ನನ್ನನ್ನು ಪರಿಗಣನೆಗೆ ತೆಗೆದುಕೊಳ್ಳಕೂಡದು. ನನ್ನ ಧರ್ಮ ಸಂಪೂರ್ಣವಾಗಿ ನನ್ನನ್ನು ಸೃಷ್ಟಿಸಿದವನ ಮತ್ತು ನನ್ನ ನಡುವಣ ವಿಷಯ. ನಾನು ಹಿಂದೂ ಆಗಿದ್ದಲ್ಲಿ, ಇಡೀ ಹಿಂದೂ ಜನಸ್ತೋಮ ನನ್ನನ್ನು ತೊರೆದರೂ ನಾನು ಹಿಂದೂ ಆಗಿ ಉಳಿಯದೆ ಹೋಗುವುದಿಲ್ಲ. ಆದರೂ ಅಹಿಂಸೆಯು ಎಲ್ಲಾ ದರ್ಮಗಳ ಗುರಿ ಎಂದು ಸೂಚಿಸುತ್ತೇನೆ.

ಆದರೆ ಅಹಿಂಸೆಯ ಆ ಉತ್ಕಟ ರೂಪವನ್ನು ನಾನು ಭಾರತಕ್ಕೆ ಎಂದಿಗೂ ಪ್ರದರ್ಶಿಸಿಲ್ಲ. ಆ ಪುರಾತನ ಸಂದೇಶವನ್ನು ಪುನಃ ನೀಡಲು ನನ್ನನ್ನು ಅರ್ಹನೆಂದು ನಾನು ಪರಿಗಣಿಸಿಕೊಂಡಿಲ್ಲ ಎನ್ನುವುದಷ್ಟೇ ಅದಕ್ಕೆ ಕಾರಣ. ನನ್ನ ಬುದ್ಧಿ ಅದನ್ನು ಸಂಪೂರ್ಣವಾಗಿ ಅರ್ಥಮಾಡಿಕೊಂಡು ಗ್ರಹಿಸಿದ್ದರೂ, ಅದು ಇನ್ನೂ ನನ್ನ ಇಡೀ ವ್ಯಕ್ತಿತ್ವದ ಒಂದು ಅಂಗಭಾಗವಾಗಿ ಆಗಿಲ್ಲ. ನನ್ನ ಶಕ್ತಿ ಇರುವುದು ನನ್ನ ಸ್ವಂತ ಬದುಕಿನಲ್ಲಿ ಯಾವುದನ್ನೇ ಪದೇಪದೇ ಪ್ರಯೋಗ ಮಾಡಿ ನೋಡದೆ ಇರುವ ಯಾವುದನ್ನೇ ಮಾಡುವಂತೆ ಜನರಿಗೆ ಹೇಳದೆ ಇರುವುದರಲ್ಲಿ. ಆದ್ದರಿಂದ ನಾನು ನನ್ನ ದೇಶಬಾಂಧವರನ್ನು ವಿಭಿನ್ನ ಜನಾಂಗಗಳ ನಡುವಣ ಸಂಬಂಧಗಳನ್ನು ನಿಯಂತ್ರಿಸುವ ಉದ್ದೇಶಕ್ಕಾಗಿ ಮತ್ತು ಸ್ವರಾಜ್ಯವನ್ನು ಗಳಿಸುವ ಉದ್ದೇಶಕ್ಕಾಗಿ ಮಾತ್ರ ಅಹಿಂಸೆಯನ್ನು ತಮ್ಮ ಪರಮಧರ್ಮವಾಗಿ ಸ್ವೀಕರಿಸಿ ಎಂದು ಇಂದು ಹೇಳುತ್ತೇನೆ. ಹಿಂದೂಗಳು, ಮುಸಲ್ಮಾನರು, ಕ್ರೈಸ್ತರು, ಸಿಖ್ಖರು ಮತ್ತು ಪಾರ್ಸಿಗಳು ಹಿಂಸೆಯನ್ನು ಆಶ್ರಯಿಸುವ ಮೂಲಕ ತಮ್ಮ ಭಿನ್ನಾಭಿಪ್ರಾಯಗಳನ್ನು ಪರಿಹರಿಸಿಕೊಳ್ಳಕೂಡದು ಮತ್ತು ಸ್ವರಾಜ್ಯವನ್ನು ಗಳಿಸಲು ಸಾಧನ ಅಹಿಂಸಾತ್ಮಕವಾಗಿರಬೇಕು. ನಾನು ಇದನ್ನು ಭಾರತದ ಮುಂದೆ ದುರ್ಬಲರ ಆಯುಧವನ್ನಾಗಿ ಅಲ್ಲದೆ ಬಲಿಷ್ಠರ ಸಾಧನವನ್ನಾಗಿ ಇಡುತ್ತೇನೆ. ಹಸುವೊಂದನ್ನು ರಕ್ಷಿಸಲು ಹಿಂದೂಗಳು ಮುಸಲ್ಮಾನನೊಬ್ಬನನ್ನು ಕೊಂದರೆ ಅದು ಬಲಾತ್ಕಾರವಲ್ಲದೆ ಮತ್ತೇನು? ಅದು ಬಲಪ್ರಯೋಗದಿಂದ ಒಬ್ಬ ಮುಸಲ್ಮಾನನ್ನು ಹಿಂದೂಧರ್ಮಕ್ಕೆ ಪರಿವರ್ತಿಸಲು ಇಚ್ಛಿಸುವಂತಿದೆ. ಅಂತೆಯೇ ಮಸೀದಿಗಳ ಮುಂದೆ ಹಿಂದೂಗಳು ವಾದ್ಯನುಡಿಸುವುದನ್ನು ಬಲಪ್ರಯೋಗದಿಂದ ತಡೆಯಲು ಮುಸಲ್ಮಾನರು ಯತ್ನಿಸಿದರೆ ಅದು ಬಲಾತ್ಕಾರವಲ್ಲದೆ ಮತ್ತೇನು? ಸದ್ದುಗದ್ದಲಗಳ ನಡುವೆ ತನ್ನ ಪ್ರಾರ್ಥನೆಗಳಲ್ಲಿ ತಲ್ಲೀನವಾಗಿರುವುದರಲ್ಲಿದೆ ಶ್ರೇಷ್ಠತೆ. ನಮ್ಮ

ಧಾರ್ಮಿಕ ಆಶಯಗಳನ್ನು ಗೌರವಿಸುವಂತೆ ಒಬ್ಬರನ್ನೊಬ್ಬರು ಬಲಾತ್ಕರಿಸುವ ವ್ಯರ್ಥಪ್ರಯತ್ನವನ್ನು ನಾವು ಮುಂದುವರೆಸಿದರೆ, ಭವಿಷ್ಯದ ಜನಾಂಗವು ನಮ್ಮಿಬ್ಬರನ್ನೂ ಅಧಾರ್ಮಿಕ ಪ್ರಾಕೃತಜನವೆಂದು ತೀರ್ಮಾನಿಸುತ್ತದೆ. ಒಂದು ಲಕ್ಷ ಇಂಗ್ಲಿಷ್ ಜನರನ್ನು ಶಿಕ್ಷೆಗೆ ಒಳಪಡಿಸಲು ಬಲಪ್ರಯೋಗವನ್ನು ಆಶ್ರಯಿಸಬೇಕಾದುದಕ್ಕೆ ಮೂವತ್ತು ಕೋಟಿ ಜನರುಳ್ಳ ರಾಷ್ಟ್ರ ನಾಚಿಕೆಪಡಬೇಕು. ಅವರನ್ನು ಪರಿವರ್ತಿಸಬೇಕಾದರೆ, ಅಥವಾ, ನಿಮಗೆ ಬೇಕಾದರೆ, ಅವರನ್ನು ದೇಶದಿಂದಾಚೆಗೆ ಓಡಿಸಬೇಕಾದರೆ ಕೂಡ ನಮಗೆ ಬೇಕಾದುದು ಶಸ್ತ್ರಗಳ ಬಲವಲ್ಲ, ಸಂಕಲ್ಪದ ಬಲ. ನಮಗೆ ಎರಡನೆಯದು ಇಲ್ಲದಿದ್ದರೆ ಎಂದಿಗೂ ಮೊದಲನೆಯದನ್ನು ನಾವು ಪಡೆಯುವುದಿಲ್ಲ. ನಾವು ಸಂಕಲ್ಪದ ಶಕ್ತಿಯನ್ನು ಬೆಳೆಸಿದರೆ ನಮಗೆ ಶಸ್ತ್ರದ ಬಲ ಬೇಕಾಗುವುದಿಲ್ಲ ಎನ್ನುವುದು ಗೊತ್ತಾಗುತ್ತದೆ.

ಆದ್ದರಿಂದ ನಾನು ಹೇಳಿದ ಉದ್ದೇಶಗಳಿಗಾಗಿ ಅಹಿಂಸೆಯನ್ನು ಅಂಗೀಕರಿಸುವುದು ನಮ್ಮ ರಾಷ್ಟ್ರದ ಉಳಿವಿಗೆ ಅತ್ಯಂತ ಸಹಜವಾದ ಮತ್ತು ಅಗತ್ಯವಾದ ಷರತ್ತು. ಅದು ನಮ್ಮ ಸಾಂಘಿಕ ದೇಹಬಲವನ್ನು ಉತ್ತಮ ಉದ್ದೇಶವೊಂದಕ್ಕಾಗಿ ಮಿತವ್ಯಯದಿಂದ ಉಳಿಸುವುದನ್ನು ನಮಗೆ ಅದು ಹೇಳಿಕೊಡುತ್ತದೆ. ಈಗ ನಾವು ಆ ಬಲವನ್ನು ವ್ಯರ್ಥ ಭ್ರಾತೃಹತ್ಯೆಯ ಹೋರಾಟವೊಂದರಲ್ಲಿ ದುರ್ವ್ಯಯ ಮಾಡುತ್ತಿದ್ದೇವೆ. ಈ ಹೋರಾಟದ ತರುವಾಯ ಪ್ರತಿಯೊಂದು ಪಕ್ಷವೂ ಆಯಾಸದಿಂದ ನಿತ್ರಾಣವಾಗುತ್ತದೆ. ಪ್ರತಿಯೊಂದು ಸಶಸ್ತ್ರ ಬಂಡಾಯವೂ, ಅದನ್ನು ರಾಷ್ಟ್ರವು ಬೆಂಬಲಿಸದಿದ್ದರೆ, ಒಂದು ಹುಚ್ಚಿನ ಕೃತ್ಯವಾಗುತ್ತದೆ ಆದರೆ ರಾಷ್ಟ್ರವು ಪೂರ್ಣವಾಗಿ ಬೆಂಬಲಿಸಿದ ಅಸಹಕಾರದ ಯಾವುದೇ ಅಂಶ ಒಂದೇ ಒಂದು ತೊಟ್ಟು ರಕ್ತ ಸುರಿಸದೆ ಆ ಗುರಿಯನ್ನು ಸಾಧಿಸಬಲ್ಲದು.

*ಯಂಗ್ ಇಂಡಿಯಾ*, 29 ಮೇ 1924



# 34

# ಮತಾಂತರಕ್ಕೆ ಅನುಮತಿಯಿಲ್ಲ

ಇಂಗ್ಲಿಷ್ ಸಮಾಚಾರ ಪತ್ರಿಕೆಗಳಿಂದ ಆಯ್ದು ತೆಗೆದ ಭಾಗಗಳಲ್ಲಿ ಅನೇಕ ಸಂತಸದ ವಿಷಯಗಳ ನಡುವೆ ಆಶ್ರಮದಲ್ಲಿ ಮೀರಾಬಾಯಿ ಎಂದು ಹೆಸರು ಪಡೆದಿರುವ ಕುಮಾರಿ ಸ್ಲೇಡ್ ಹಿಂದೂ ಧರ್ಮವನ್ನು ಸ್ವೀಕರಿಸಿದ್ದಾರೆ ಎಂಬ ಸುದ್ದಿ ಇದೆ. ಆಕೆ ಹಾಗೆ ಮಾಡಿಲ್ಲ ಎಂದು ನಾನು ಹೇಳಬಲ್ಲೆ. ನಾಲ್ಕು ವರ್ಷಗಳ ಹಿಂದೆ ಆಕೆ ಬಂದಾಗ ಇದ್ದುದಕ್ಕಿಂತಲೂ ಉತ್ತಮಳಾದ ಕ್ರೈಸ್ತಳಾಗಿದ್ದಾಳೆಂದು ನಾನು ನಂಬುತ್ತೇನೆ. ಆಕೆ ಚಿಕ್ಕ ವಯಸ್ಸಿನ ಹುಡುಗಿಯಲ್ಲ. ಆಕೆ ಮೂವತ್ತನ್ನು ದಾಟಿದ್ದಾಳೆ ಮತ್ತು ಮರ ಪ್ರಾಣಿಗಳನ್ನು ಪ್ರೀತಿಸುತ್ತಾ ಈಜಿಪ್ಟ್, ಪರ್ಷಿಯ ಮತ್ತು ಯುರೋಪ್‌ಗಳನ್ನು ಏಕಾಂಗಿಯಾಗಿ ಸುತ್ತಿದ್ದಾಳೆ. ನನ್ನ ವಶದಲ್ಲಿ ಮುಸಲ್ಮಾನ, ಪಾರ್ಸಿ ಮತ್ತು ಕ್ರೈಸ್ತ ಅಪ್ರಾಪ್ತ ವಯಸ್ಕರನ್ನು ಹೊಂದಿರುವ ಭಾಗ್ಯ ಪಡೆದಿದ್ದೇನೆ. ಅವರು ಸ್ವೀಕರಿಸುವಂತೆ ಹಿಂದೂಧರ್ಮವನ್ನು ಎಂದೂ ಅವರ ಮುಂದೆ ಇಟ್ಟಿದ್ದಿಲ್ಲ. ತಮ್ಮ ಸ್ವಂತ ಧರ್ಮಗ್ರಂಥಗಳನ್ನು ಗೌರವಿಸಲು ಮತ್ತು ಓದಲು ಅವರನ್ನು ಉತ್ತೇಜಿಸಲಾಗುತ್ತಿತ್ತು. ಹಿಂದಿಗಿಂತಲೂ ಉತ್ತಮವಾಗಿ ತಮ್ಮ ಧರ್ಮಗ್ರಂಥಗಳನ್ನು ಅರಿತುಕೊಳ್ಳಲು ಮತ್ತು ಪ್ರೀತಸಲು ಪ್ರೇರಣೆ ಪಡೆದ ಗಂಡಸರು ಮತ್ತು ಹೆಂಗಸರು, ಹುಡುಗರು ಮತ್ತು ಹುಡುಗಿಯರು ಇತರ ಧರ್ಮಗಳನ್ನು ಸಹಾನುಭೂತಿ ಮತ್ತು ಗೌರವದಿಂದ ಅಧ್ಯಯನ ಮಾಡಲು ಕೂಡ ಉತ್ತೇಜನ ಪಡೆದಿದ್ದರೆ ಅಂಥ ನಿದರ್ಶನಗಳನ್ನು ನಾನು ಸಂತೋಷದಿಂದ ನೆನೆಸಿಕೊಳ್ಳುತ್ತೇನೆ. ಇಂದು ಆಶ್ರಮದಲ್ಲಿ ಅನೇಕ ಧರ್ಮಗ್ರಂಥಗಳು ಪ್ರಾತಿನಿಧ್ಯ ಪಡೆದಿವೆ. ಯಾವುದೇ ಮತಾಂತರ ಪದ್ಧತಿಯನ್ನು

ಆಚರಿಸುತ್ತಿಲ್ಲ ಅಥವಾ ಅದಕ್ಕೆ ಅವಕಾಶ ನೀಡಿಲ್ಲ. ಈ ಎಲ್ಲ ಧರ್ಮಗಳೂ ಸತ್ಯ ಮತ್ತು ದೇವರಿಂದ ಸ್ಫೂರ್ತಿ ಪಡೆದವು, ಹಾಗೂ ದೋಷಯುಕ್ತ ಜನಗಳ ಅಗತ್ಯವಾಗಿಯೇ ದೋಷಯುಕ್ತ ನಿರ್ವಹಣೆಯ ಮೂಲಕ ಅವೆಲ್ಲವೂ ಹಾನಿಗೀಡಾಗಿದೆ ಎಂಬುದನ್ನು ನಾವು ಒಪ್ಪುತ್ತೇವೆ. ಕುಮಾರಿ ಸ್ಲೇಡ್ ಹೊತ್ತಿರುವುದು ಒಂದು ಹಿಂದೂ ಹೆಸರಲ್ಲ, ಅದು ಒಂದು ಭಾರತೀಯ ಹೆಸರು. ಆಕೆಯ ಸೂಚನೆಯಂತೆ ಮತ್ತು ಆಕೆಯ ಅನುಕೂಲಕ್ಕಾಗಿಯೇ ಹೀಗೆ ಮಾಡಲಾಗಿದೆ.

*ಯಂಗ್ ಇಂಡಿಯಾ*, 20 ಫೆಬ್ರವರಿ 1930



# 35

# ಧರ್ಮಗಳ ಸಮಾನತೆ

ಮಹಮದ್, ಜೊರೊ ಅಸ್ಟರ್ ಮತ್ತು ಮೋಸಸರಿಗೆ ಇರುವಂತೆಯೇ ಏಸುವಿಗೂ ಹಿಂದೂಧರ್ಮದಲ್ಲಿ ಸಾಕಷ್ಟು ಸ್ಥಾನವಿದೆ. ವಿಭಿನ್ನ ಧರ್ಮಗಳು ನನಗೆ ಒಂದೇ ತೋಟದ ಸುಂದರ ಪುಷ್ಪಗಳು ಅಥವಾ ಅವು ಒಂದೇ ಮಹಾವೃಕ್ಷದ ಕೊಂಬೆಗಳು. ಆದ್ದರಿಂದ ಅವು ಸಮಾನವಾಗಿ ಸತ್ಯ. ಆದರೆ ಅವು ಸಮಾನವಾಗಿ ದೋಷಯುಕ್ತವಾದ ಮಾನವ ಸಾಧನಗಳ ಮೂಲಕ ಗ್ರಹಿಸಲ್ಪಟ್ಟಿವೆ ಮತ್ತು ವ್ಯಾಖ್ಯಾನಿಸಲ್ಪಟ್ಟಿವೆ. ಭಾರತದಲ್ಲಿ ಮತ್ತು ಬೇರೆಡೆ ಇಂದು ನಡೆಯುತ್ತಿರುವ ರೀತಿಯ ಮತಾಂತರದ ಕಲ್ಪನೆಯೊಂದಿಗೆ ನನ್ನನ್ನು ಹೊಂದಿಸಿಕೊಳ್ಳಲು ನನಗೆ ಸಾಧ್ಯವಿಲ್ಲ. ಪ್ರಪಂಚ ಶಾಂತಿಯತ್ತ ಮುನ್ನಡೆಯುವುದಕ್ಕೆ ಇದು ಅತಿ ದೊಡ್ಡ ಅಡಚಣೆಯಾಗಿರುವಂತಹ ಒಂದು ದೋಷ ಅದು. "ಪರಸ್ಪರ ವಿರುದ್ಧ ಧರ್ಮಗಳು" ಎನ್ನುವುದು ಒಂದು ಪಾಷಂಡಿ ಪದಪ್ರಯೋಗ. ನಾನು ನಂಬಿರುವಂತೆ, ಧರ್ಮದ ಅಥವಾ ಧರ್ಮಗಳ ತಾಯಿಯಾದ ಭಾರತದಲ್ಲಿನ ಪರಿಸ್ಥಿತಿಯನ್ನು ಅದು ಸರಿಯಾಗಿ ವರ್ಣಿಸುತ್ತದೆ. ನಿಜವಾಗಿ ಅದು ತಾಯಿಯಾಗಿದ್ದಲ್ಲಿ, ಅದರ ತಾಯ್ತನ ಪರೀಕ್ಷೆಗೆ ಒಳಗಾಗಿದೆ. ಕ್ರೈಸ್ತನೊಬ್ಬ ಹಿಂದುವೊಬ್ಬನನ್ನು ಕ್ರೈಸ್ತಮತಕ್ಕೆ ಮತಾಂತರಿಸಲು ಏಕೆ ಅಪೇಕ್ಷಿಸಬೇಕು ಮತ್ತು ಅಂತೆಯೇ ವಿಪರ್ಯಯವಾಗಿ? ಹಿಂದೂವು ಒಬ್ಬ ಒಳ್ಳೆಯ ಅಥವಾ ದೈವಭಕ್ತ ವ್ಯಕ್ತಿಯಾಗಿದ್ದಲ್ಲಿ ಕ್ರೈಸ್ತನು ಅದರಿಂದ ಏಕೆ ತೃಪ್ತಿ ಪಟ್ಟುಕೊಳ್ಳಬಾರದು? ವ್ಯಕ್ತಿಯೊಬ್ಬನ ನೀತಿನಡೆಗಳು ಯಾವುದೇ ಸಂಬಂಧವಿಲ್ಲ ವಿಷಯವಾದರೆ, ಚರ್ಚು, ಮಸೀದಿ ಅಥವಾ ದೇವಸ್ಥಾನದಲ್ಲಿ ಒಂದು ನಿರ್ದಿಷ್ಟ ರೀತಿಯಲ್ಲಿ

ಮಾಡುವ ಪೂಜಾವಿಧಾನ ಒಂದು ಪೊಳ್ಳು ಕ್ರಮವಾಗುತ್ತದೆ. ವೈಯಕ್ತಿಕ ಅಥವಾ ಸಾಮಾಜಿಕ ಬೆಳವಣಿಗೆಗೆ ಅದು ಒಂದು ಅಡ್ಡಿ ಕೂಡ ಆಗಬಹುದು. ಮತಸೂತ್ರವೊಂದರ ನಿರ್ದಿಷ್ಟ ರೂಪವನ್ನು ಅಥವಾ ಜಪವನ್ನು ಒತ್ತಾಯಿಸುವುದು ತೀವ್ರ ಜಗಳಗಳಿಗೆ ಒಂದು ಪ್ರಬಲ ಕಾರಣವಾಗಬಹುದು. ಅದು ರಕ್ತ ಪಾತಕ್ಕೆ ಅಥವಾ ಧರ್ಮದಲ್ಲಿ, ಅಂದರೆ ದೇವರಲ್ಲಿಯೇ, ಸಂಪೂರ್ಣ ಅಪನಂಬಿಕೆಯಲ್ಲಿ ಪರ್ಯವಸಾನವಾಗುವುದರತ್ತ ಒಯ್ಯುತ್ತದೆ.

*ಹರಿಜನ*, 30 ಜನವರಿ 1937



## 36

# ಧರ್ಮಗಳ ಸಮಾನತೆ

*ಸಿ.ಎಫ್. ಆ್ಯಂಡ್ರ್ಯೂಸ್:* "ಬಹಳ ಆಲೋಚನೆ ಮತ್ತು ಪ್ರಾರ್ಥನೆಯ ತರುವಾಯ ಒಬ್ಬ ಕ್ರೈಸ್ತನಾಗುವ ಹೊರತು ತಾನು ಶಾಂತಿ ಮತ್ತು ಮೋಕ್ಷ ಪಡೆಯಲಾಗುವುದಿಲ್ಲ ಎಂದು ಹೇಳುವ ಮನುಷ್ಯನೊಬ್ಬನಿಗೆ ನೀವು ಏನು ಹೇಳುತ್ತೀರಿ?"

*ಗಾಂಧೀಜಿ:* "ಕ್ರೈಸ್ತೇತರನೊಬ್ಬ (ಹಿಂದೂ ಒಬ್ಬ) ಒಬ್ಬ ಕ್ರೈಸ್ತನ ಬಳಿ ಬಂದು ಆ ಮಾತನ್ನು ಹೇಳಿದಲ್ಲಿ, ಮತವನ್ನು ಬದಲಾಯಿಸುವುದರಲ್ಲಿ ಶ್ರೇಯಸ್ಸನ್ನು ಕಾಣುವುದಕ್ಕಿಂತ ಒಳ್ಳೆಯ ಹಿಂದೂ ಆಗುವಂತೆ ಅವನಿಗೆ ಆ ಕ್ರೈಸ್ತನು ಹೇಳಬೇಕು ಎನ್ನುತ್ತೇನೆ."

*ಆ್ಯಂಡ್ರ್ಯೂಸ್:* "ನನ್ನ ಸ್ವಂತ ನಿಲುವನ್ನು ನೀವು ಅರಿತಿದ್ದರೂ, ನಾನು ಇದರಲ್ಲಿ ನಿಮ್ಮಷ್ಟು ದೂರಹೋಗಲಾರೆ. ಕ್ರಿಸ್ತನ ಮೂಲಕ ಹೊರತು ಮೋಕ್ಷ ಸಾಧ್ಯವಿಲ್ಲ ಎಂಬ ನಿಲುವನ್ನು ನಾನು ಬಹಳ ಹಿಂದೆಯೇ ತ್ಯಜಿಸಿದೆ. ಆದರೆ ಆಕ್ಸ್‌ಫರ್ಡ್ ಗ್ರೂಪ್ ಮೂವ್‌ಮೆಂಟ್‌ನ ಜನ ನಿಮ್ಮ ಮಗನ ಜೀವನವನ್ನು ಬದಲಾಯಿಸಿದರು ಮತ್ತು ಅವನಿಗೆ ಮತಾಂತರಗೊಳ್ಳುವ ಮನಸ್ಸಾಯಿತು ಎಂದು ಇಟ್ಟುಕೊಳ್ಳಿ. ಆಗ ನೀವು ಏನು ಹೇಳುತ್ತೀರಿ?"

*ಗಾಂಧೀಜಿ:* "ಆಕ್ಸ್‌ಫರ್ಡ್ ಗ್ರೂಪಿನವರು ತಮಗಿಷ್ಟ ಬಂದಷ್ಟು ಜನರ ಜೀವನಗಳನ್ನು ಬದಲಾಯಿಸಲಿ, ಆದರೆ ಆ ಜನರ ಧರ್ಮವನ್ನು ಬದಲಾಯಿಸಕೂಡದು ಎಂದು ಹೇಳುತ್ತೇನೆ. ಅವರವರ ಧರ್ಮಗಳಲ್ಲಿ ಇರುವ ಶ್ರೇಷ್ಠ ಅಂಶಗಳತ್ತ ಅವರ ಗಮನ ಸೆಳೆದು ಅದಕ್ಕನುಸಾರವಾಗಿ ಬಾಳಿ ಎಂದು ಅವರಿಗೆ ಹೇಳುವ ಮೂಲಕ ಅವರ ಜೀವನಗಳನ್ನು ಬದಲಾಯಿಸಬಹುದು.

ಒಬ್ಬ ವ್ಯಕ್ತಿ ನನ್ನ ಬಳಿಗೆ ಬಂದ. ಅವನು ಬ್ರಾಹ್ಮಣರ ಮಗ. ನಿಮ್ಮ ಪುಸ್ತಕವನ್ನು ಅವನು ಓದಿದ್ದು ಅದು ಅವನನ್ನು ಕ್ರೈಸ್ತಮತವನ್ನು ಸ್ವೀಕರಿಸುವಂತೆ ಮಾಡಿತು. ಅವನ ಪೂರ್ವಜರ ಧರ್ಮ ತಪ್ಪಾಗಿತ್ತೆಂದು ಅವನು ಭಾವಿಸಿದನೇ ಎಂದು ನಾನು ಅವನನ್ನು ಕೇಳಿದೆ. ಅವನು 'ಇಲ್ಲ' ಎಂದ. ಆಗ ನಾನು ಹೇಳಿದೆ: 'ಬೈಬಲನ್ನು ಪ್ರಪಂಚದ ಶ್ರೇಷ್ಠ ಧಾರ್ಮಿಕಗ್ರಂಥಗಳಲ್ಲಿ ಒಂದು ಮತ್ತು ಕ್ರಿಸ್ತನನ್ನು ಮಹೋಪದೇಶಕರಲ್ಲಿ ಒಬ್ಬ ಎಂದು ನೀನು ಒಪ್ಪಲು ಏನಾದರೂ ತೊಂದರೆ ಇದೆಯೇ?' ನಿಮ್ಮ ಪುಸ್ತಕಗಳ ಮೂಲಕ ನೀವು ಭಾರತೀಯರಿಗೆ ಬೈಬಲ್ಲನ್ನು ಕೈಗೆತ್ತಿಕೊಂಡು ಕ್ರೈಸ್ತಮತವನ್ನು ಸ್ವೀಕರಿಸಿ ಎಂದು ಎಂದಿಗೂ ಹೇಳಿಲ್ಲ ಮತ್ತು ನಿಮ್ಮ ನಿಲುವು ದಿವಂಗತ ಎಂ.ಮಹಮದ್ ಅಲಿಯವರದರಂತೆ, ಅಂದರೆ 'ಒಬ್ಬ ಶ್ರದ್ಧಾವಂತ ಮುಸಲ್ಮಾನ, ಅವನ ಬದುಕು ಎಷ್ಟೇ ಕೆಟ್ಟದಾಗಿರಲಿ, ಒಬ್ಬ ಒಳ್ಳೆಯ ಹಿಂದುವಿಗಿಂತ ಉತ್ತಮ', ಎಂದಾಗಿರದಿದ್ದಲ್ಲಿ, ಅವನು ನಿಮ್ಮ ಪುಸ್ತಕವನ್ನು ತಪ್ಪಾಗಿ ಓದಿಕೊಂಡಿರುತ್ತಾನೆ ಎಂದು ಹೇಳಿದೆ."

*ಆ್ಯಂಡ್ರೂಸ್*: "ದಿವಂಗತ ಎಂ.ಮಹಮದ್ ಅಲಿಯವರ ನಿಲುವನ್ನು ನಾನು ಸ್ವಲ್ಪವೂ ಒಪ್ಪುವುದಿಲ್ಲ. ಆದರೆ ವ್ಯಕ್ತಿಯೊಬ್ಬನಿಗೆ ಮತಾಂತರ ನಿಜವಾಗಿ ಅಗತ್ಯವಾದರೆ ಅವನ ದಾರಿಯಲ್ಲಿ ಅಡ್ಡಿಯಾಗಿ ನಿಲ್ಲಬಾರದು ಎಂದು ನಾನು ಹೇಳುತ್ತೇನೆ."

*ಗಾಂಧೀಜಿ:* "ಆದರೆ ಅವನಿಗೆ ಒಂದು ಅವಕಾಶವನ್ನು ಕೂಡ ನೀವು ಕೊಡುವುದಿಲ್ಲ ಎನ್ನುವುದು ನಿಮಗೆ ಕಾಣಿಸುವುದಿಲ್ಲವೇ? ನೀವು ಅವನ ಪಾಟಸವಾಲು ಕೂಡ ಮಾಡುವುದಿಲ್ಲ. ಕ್ರೈಸ್ತನೊಬ್ಬ ನನ್ನಲ್ಲಿಗೆ ಬಂದು, ಭಾಗವತವನ್ನು ಓದಿ ಆಕರ್ಷಿತನಾಗಿ, ಆ ಕಾರಣದಿಂದ ತನ್ನನ್ನು ಒಬ್ಬ ಹಿಂದೂ ಎಂದು ಘೋಷಿಸಿಕೊಳ್ಳಲು ಅಪೇಕ್ಷಿಸುತ್ತಾನೆಂದು ಇಟ್ಟುಕೊಳ್ಳಿ. ನಾನು ಅವನಿಗೆ ಹೇಳಬೇಕು: "ಕೂಡದು. ಭಾಗವತ ಕೊಡುವುದನ್ನು ಬೈಬಲ್ಲೂ ಕೊಡುತ್ತದೆ. ಅದನ್ನು ಕಂಡುಕೊಳ್ಳಲು ನೀನು ಇನ್ನೂ ಪ್ರಯತ್ನಪಟ್ಟಿಲ್ಲ. ಆ ಪ್ರಯತ್ನ ಮಾಡು ಮತ್ತು ಒಳ್ಳೆಯ ಕ್ರೈಸ್ತನಾಗು."

*ಆ್ಯಂಡ್ರೂಸ್*: "ನನಗೆ ಗೊತ್ತಿಲ್ಲ. ತಾನೊಬ್ಬ ಒಳ್ಳೆಯ ಕ್ರೈಸ್ತನಾಗುವೆನೆಂದು ಯಾವನಾದರೂ ಮನಃಪೂರ್ವಕವಾಗಿ ಹೇಳಿದರೆ, 'ನೀನು ಹಾಗಾಗಬಹುದು' ಎಂದು ನಾನು ಹೇಳುತ್ತೇನೆ. ಆದರೆ ನನ್ನ ಸ್ವಂತ ಜೀವನದಲ್ಲಿ ನನ್ನ ಬಳಿಗೆ ಬಂದ ತೀವ್ರ ಉತ್ಸಾಹಿಗಳನ್ನು ಬಲವಾಗಿ ತಡೆದಿದ್ದೇನೆ ಎಂಬುದು ನಿಮಗೆ ಗೊತ್ತು. 'ಖಂಡಿತವಾಗಿಯೂ ನನ್ನ ಕಾರಣದಿಂದಾಗಿ ಅಂಥ ಯಾವುದನ್ನೂ ನೀವು ಮಾಡಬೇಡಿ' ಎಂದು ನಾನವರಿಗೆ ಹೇಳಿದೆ. ಆದರೆ ಮಾನವಸ್ವಭಾವ ಮೂರ್ತಧರ್ಮವೊಂದನ್ನು ಅಪೇಕ್ಷಿಸುತ್ತದೆ"

*ಗಾಂಧೀಜಿ:* "ಒಬ್ಬ ವ್ಯಕ್ತಿ ಬೈಬಲನ್ನು ನಂಬಲು ಅಪೇಕ್ಷಿಸಿದರೆ, ಅವನು ಹಾಗೆ ಹೇಳಲಿ. ಆದರೆ ಅವನು ತನ್ನ ಸ್ವಂತ ಧರ್ಮವನ್ನು ಏಕೆ ತೊರೆಯಬೇಕು? ಈ ಮತಾಂತರ ಪ್ರಪಂಚಕ್ಕೆ ಯಾವುದೇ ಶಾಂತಿ ತರುವುದಿಲ್ಲ. ಧರ್ಮ ಒಂದು ಬಹಳ ವೈಯಕ್ತಿಕವಾದ ವಿಷಯ. ನಮ್ಮ ತಿಳಿವಳಿಕೆಗೆ ಅನುಗಣವಾಗಿ ನಮ್ಮ ಬಾಳನ್ನು ಬಾಳುವ ಮೂಲಕ ನಾವು ಶ್ರೇಷ್ಠವಾದುದನ್ನು ಪರಸ್ಪರ ಹಂಚಿಕೊಳ್ಳುತ್ತೇವೆ. ಈ ರೀತಿಯಲ್ಲಿ ಭಗವಂತನನ್ನು ತಲುಪುವ ಮಾನವ ಪ್ರಯತ್ನದ ಮೊತ್ತಕ್ಕೆ ನಮ್ಮದನ್ನು ಸೇರಿಸುತ್ತೇವೆ".

ಗಾಂಧೀಜಿ ಮುಂದುವರೆಸಿದರು: "ನೀವು ಎಲ್ಲಾ ದರ್ಮಗಳ ಪರಸ್ಪರ ಸಹನೆಯ ಅಥವಾ ಸಮಾನತೆಯ ನಿಲುವನ್ನು ಅಂಗೀಕರಿಸುತ್ತೀರಾ ಎನ್ನುವುದನ್ನು ಪರಿಗಣಿಸಿ. ಎಲ್ಲಾ ಮಹಾನ್ ಧರ್ಮಗಳೂ ಮೂಲಭೂತವಾಗಿ ಸಮಾನವಾಗಿವೆ ಎನ್ನುವುದು ನನ್ನ ನಿಲುವು. ನಮ್ಮ ಸ್ವಂತ ಧರ್ಮದ ಬಗ್ಗೆ ನಮಗಿರುವಂತೆಯೇ ಇತರ ಧರ್ಮಗಳ ವಿಷಯದಲ್ಲಿಯೂ ನಮಗೆ ಸಹಜವಾದ ಗೌರವ ಇರಬೇಕು. ಪರಸ್ಪರ ಸಹನೆಯಲ್ಲ, ಸಮಾನವಾದ ಗೌರವ ಎಂಬುದು ನೆನಪಿರಲಿ"

ಹರಿಜನ, 28 ನವೆಂಬರ್ 1936



# 37

# ಹಿಂದೂಧರ್ಮದ ಬಗ್ಗೆ ಕ್ರೈಸ್ತ ಪ್ರಚಾರಮಂಡಲಿಗಳ ದೃಷ್ಟಿ

ಹಿಂದೂಧರ್ಮ ಅಸತ್ಯ ಎಂದು ಕ್ರೈಸ್ತ ಮಿತ್ರರು ಇಂದು ಹೇಳುವುದಿಲ್ಲ ಅಥವಾ ಒಪ್ಪಿಕೊಳ್ಳುವುದಿಲ್ಲವಾದರು ಹಿಂದೂಧರ್ಮವು ತಪ್ಪು ಮತ್ತು ತಾವು ನಂಬಿರುವಂಥ ಕ್ರೈಸ್ತಮತ ಮಾತ್ರವೇ ನಿಜವಾದ ಧರ್ಮ ಎಂಬ ನಂಬಿಕೆಯನ್ನು ತಮ್ಮ ಹೃದಯಗಳಲ್ಲಿ ಇಟ್ಟುಕೊಂಡಿರಬೇಕು ಎಂಬ ಅಳುಕು ನನಗಿದೆ. ಅಂಥದ್ದು ಒಂದು ಇಲ್ಲದಿದ್ದರೆ ಸಿ.ಎಂ.ಎಸ್ ಮನವಿಯನ್ನು* ಅರ್ಥಮಾಡಿಕೊಳ್ಳುವುದು ಹಾಗಿರಲಿ, ಮೆಚ್ಚುವುದಕ್ಕಂತೂ ಸಾಧ್ಯವೇ ಇಲ್ಲ. ಆದರಿಂದ ಕೆಲವು ಮರ್ಮಪ್ರಕಾಶಕ ಉಲ್ಲೇಖಗಳನ್ನು ಈ ಅಂಕಣಗಳಲ್ಲಿ ಕೆಲವು ದಿನಗಳ ಹಿಂದೆ ನಾನು ಪುನಃಪ್ರಕಟಣೆ ಮಾಡಿದೆ. ಹಿಂದೂಜೀವನದೊಳಕ್ಕೆ ನುಸುಳಿರುವ ಅಸ್ಪೃಶ್ಯತೆ ಮತ್ತು ಇತರ ಅನೇಕ ದೋಷಗಳ ಮೇಲಿನ ಖಂಡನೆಯನ್ನು ಅರ್ಥಮಾಡಿಕೊಳ್ಳಬಹುದು. ಒಪ್ಪಿಗೆಯಾಗಿರುವ ದೋಷಗಳನ್ನು ನಿವಾರಿಸಿ ನಮ್ಮ ಧರ್ಮವನ್ನು ಶುದ್ಧಿಗೊಳಿಸಲು ಅವು ನಮಗೆ ಸಹಾಯ ಮಾಡುವುದಾದಲ್ಲಿ ಅವು ಉಪಯುಕ್ತವಾದ ರಚನಾತ್ಮಕ ಕಾರ್ಯವನ್ನು ನಿರ್ವಹಿಸುತ್ತವೆ. ಅದನ್ನು ಕೃತಜ್ಞತಾಪೂರ್ವಕವಾಗಿ ಸ್ವೀಕರಿಸಲಾಗುತ್ತದೆ. ಆದರೆ ಸದ್ಯದ ಪ್ರಯತ್ನವನ್ನು ಒಬ್ಬನು ಅರ್ಥಮಾಡಿಕೊಳ್ಳುವ ಮಟ್ಟಿಗೆ, ಅದು ಹಿಂದೂಧರ್ಮವನ್ನು ಅದರ

---

* ಇಂಗ್ಲೆಂಡಿನ ಚರ್ಚ್‌ಮಿಷನರಿ ಸೊಸೈಟಿಯು ನೀಡಿದ ಮನವಿ. ಅದರಿಂದ ತೆಗೆದ ಉಲ್ಲೇಖಗಳನ್ನು 26 ಡಿಸೆಂಬರ್ 1936ರ ಹರಿಜನ ಪತ್ರಿಕೆಯಲ್ಲಿ ಪುನಃ ಪ್ರಕಟಿಸಲಾಗಿತ್ತು.

ಅಸ್ತಿಭಾರದಿಂದಲೇ ಕಿತ್ತುಹಾಕಿ, ಅದರ ಜಾಗದಲ್ಲಿ ಬೇರೊಂದು ಧರ್ಮವನ್ನು ಸ್ಥಾಪಿಸುವುದಾಗಿದೆ. ಇದು ರಿಪೇರಿ ಅತ್ಯಗತ್ಯವಾಗಿರುವ ಆದರೆ ಅದರಲ್ಲಿ ವಾಸಿಸುವವನಿಗೆ ಖಂಡಿತವಾಗಿಯೂ ಚೆನ್ನಾಗಿ ಮತ್ತು ವಾಸಯೋಗ್ಯವಾಗಿ ಕಾಣುವ ಮನೆಯೊಂದನ್ನು ಉರುಳಿಸಿ ಧ್ವಂಸಮಾಡುವ ಪ್ರಯತ್ನದಂತಿದೆ. ಅದನ್ನು ರಿಪೇರಿ ಹೇಗೆ ಮಾಡಬೇಕೆನ್ನುವುದನ್ನು ಅವನಿಗೆ ತೋರಿಸುವ ಮತ್ತು ತಾವೇ ಅದನ್ನು ಮಾಡಲು ಕೂಡ ಮುಂದೆ ಬರುವವರನ್ನು ಅವನು ಸ್ವಾಗತಿಸುವುದರಲ್ಲಿ ಆಶ್ಚರ್ಯವಿಲ್ಲ. ಆದರೆ ಆ ಮನೆಯ ರಿಪೇರಿ ಸಾಧ್ಯವಿಲ್ಲ ಮತ್ತು ಅದು ಮಾನವ ವಾಸಕ್ಕೆ ಯೋಗ್ಯವಾಗಿಲ್ಲ ಎಂದು ಅದರ ನಿವಾಸಿಗೆ ನಂಬಿಕೆ ಹುಟ್ಟದಿದ್ದರೆ, ಯುಗಾಂತರಗಳ ಕಾಲ ಅವನಿಗೆ ಮತ್ತು ಅವನ ಪೂರ್ವಜರಿಗೆ ಚೆನ್ನಾಗಿ ಉಪಯುಕ್ತವಾಗಿದ್ದ ಮನೆಯನ್ನು ಧ್ವಂಸಮಾಡಲು ಹವಣಿಸುವವರನ್ನು ಅವನು ಅತ್ಯಂತ ಖಚಿತವಾಗಿ ಪ್ರತಿಭಟಿಸುತ್ತಾನೆ. ಕ್ರೈಸ್ತಜಗತ್ತು ಹಿಂದೂಭವನದ ಬಗ್ಗೆ ಆ ಅಭಿಪ್ರಾಯವನ್ನು ಇಟ್ಟುಕೊಂಡಿದ್ದರೆ, "ಧರ್ಮಗಳ ಸಂಸತ್ತು" ಮತ್ತು "ಅಂತರರಾಷ್ಟ್ರೀಯ ಸೌಭ್ರಾತೃತ್ವ" ಎಂಬವು ಪೊಳ್ಳು ಶಬ್ದಗಳು. ಏಕೆಂದರೆ ಈ ಎರಡು ಶಬ್ದಗಳು ಸ್ಥಾನಮಾನದ ಸಮಾನತೆಯನ್ನು, ಸಮಾನ ವೇದಿಕೆಯನ್ನು ಪೂರ್ವಭಾವಿಯಾಗಿ ಒಳಗೊಳ್ಳುತ್ತದೆ. ಕೆಳದರ್ಜೆಯವರ ಮತ್ತು ಮೇಲುದರ್ಜೆಯವರ, ಅಥವಾ ತಿಳಿದವರ ಮತ್ತು ತಿಳಿಯದವರ, ಆತ್ಮೋನ್ನತಿಗೆ ಪಡೆದವರು ಮತ್ತು ಆತ್ಮೋನ್ನತಿ ಪಡೆಯದವರು ಉತ್ತಮಕುಲದಲ್ಲಿ ಹುಟ್ಟಿದವರು ಮತ್ತು ಕೀಳುಕುಲದಲ್ಲಿ ಹುಟ್ಟಿದವರು, ಜಾತಿವಂತ ವ್ಯಕ್ತಿ ಮತ್ತು ಜಾತಿಬಾಹಿರ ಇವರುಗಳ ನಡುವೆ ಒಂದು ಸಮಾನ ವೇದಿಕೆ ಇರಲು ಸಾಧ್ಯವಿಲ್ಲ. ನನ್ನ ಸಾದೃಶ್ಯ ದೋಷಯುಕ್ತವಾಗಿರಬಹುದು, ಅವಮಾನಕರವಾಗಿ ಕೂಡ ಕಾಣಬಹುದು. ನನ್ನ ವಾದ ತರ್ಕಬದ್ಧವಾಗಿಲ್ಲದಿರಬಹುದು. ಆದರೆ ನನ್ನ ಹೇಳಿಕೆ ಅಂತೆಯೇ ದೃಢವಾಗಿ ಉಳಿಯುತ್ತದೆ.

*ಹರಿಜನ*, 13 ಮಾರ್ಚ್ 1937



# 38

# ಧರ್ಮಗಳ ಸಮಾನತೆ

ಕೆಲವು ದಿನದ ಹಿಂದೆ ಇಲ್ಲಿಗೆ ಬಂದಿದ್ದ ಶ್ರೀ ಕೀಥಾನ್‌ರಿಗೆ ಎಲ್ಲಾ ಧರ್ಮಗಳೂ ಸತ್ಯ ಮಾತ್ರವಲ್ಲ ಸಮಾನ ಕೂಡ ಎಂದು ಗಾಂಧೀಜಿ ಹೇಳಿದಾಗ, ಅವರ ಮನಸ್ಸಿನೊಳಗೆ ಏನಿತ್ತೆಂಬುದರ ಬಗ್ಗೆ ಪೂರ್ತಿ ಖಚಿತವಾಗಿರಲಿಲ್ಲ. ಎಲ್ಲಾ ಧರ್ಮಗಳೂ ಸಮಾನ ಎನ್ನುವುದು ವೈಜ್ಞಾನಿಕವಾಗಿ ಸರಿಯಲ್ಲ-ಎಂದು ಅವರಿಗೆ ಅನಿಸಿತ್ತು-ಜನ ವಿಶ್ವಚೇತನವಾದಿಗಳಿಗೂ ಈಶ್ವರವಾದಿಗಳಿಗೂ ನಡುವೆ ಹೋಲಿಕೆ ಮಾಡುತ್ತಾರೆ. ಶ್ರೀ ಕೀಥಾನ್ ಹೇಳಿದರು : "ಧರ್ಮಗಳನ್ನು ಹೋಲಿಸುವುದರಿಂದ ಏನೂ ಉಪಯೋಗವಿಲ್ಲ ಎಂದು ನಾನು ಹೇಳುತ್ತೇನೆ. ಅವು ವಿಭಿನ್ನ ಮಾರ್ಗಗಳು. ಇದನ್ನು ಬೇರೆ ಶಬ್ದಗಳಲ್ಲಿ ನಾವು ವಿವರಿಸಬಹುದು ಎಂದು ನೀವು ಭಾವಿಸುತ್ತೀರಾ?"

"ಅವುಗಳನ್ನು ಹೋಲಿಸುವುದು ಸಾಧ್ಯವಿಲ್ಲ ಎನ್ನುವಾಗ ನೀವು ಸರಿ. ಆದರೆ ಅದರಿಂದ ಮಾಡಬಹುದಾದ ಊಹೆ ಅವು ಸಮಾನ ಎನ್ನುವುದು. ಎಲ್ಲಾ ಮನುಷ್ಯರೂ ಸ್ವತಂತ್ರರಾಗಿ ಮತ್ತು ಸಮಾನರಾಗಿ ಹುಟ್ಟಿರುತ್ತಾರೆ, ಆದರೆ ದೈಹಿಕವಾಗಿ ಮತ್ತು ಮಾನಸಿಕವಾಗಿ ಒಬ್ಬನು ಮತ್ತೊಬ್ಬನಿಗಿಂತ ಬಹಳ ಬಲಿಷ್ಠ ಅಥವಾ ದುರ್ಬಲ ಆಗಿರುತ್ತಾನೆ. ಆದ್ದರಿಂದ ಮೇಲಿನ ನೋಟಕ್ಕೆ ಅವರಿಬ್ಬರ ನಡುವೆ ಯಾವ ಸಮಾನತೆಯೂ ಇಲ್ಲ. ಆದರೆ ಒಂದು ಸಾರಭೂತವಾದ ಸಮಾನತೆ ಇದೆ. ನಮ್ಮ ನಗ್ನಸ್ವರೂಪದಲ್ಲಿ ದೇವರು ನನ್ನನ್ನು ಗಾಂಧೀ ಎಂದು ಮತ್ತು ನಿಮ್ಮನ್ನು ಕೀಥಾನ್ ಎಂದು ಪರಿಗಣಿಸುವುದಿಲ್ಲ. ಈ ಮಹಾ ವಿಶ್ವದಲ್ಲಿ ನಾವು ಏತರವರು? ನಾವು ಅಣುಗಳಿಗೂ ಚಿಕ್ಕವರು ಮತ್ತು ಅಣುಗಳ ನಡುವೆ ಯಾವುದು ಚಿಕ್ಕದು ಮತ್ತು ಯಾವುದು ದೊಡ್ಡದು ಎಂದು ಕೇಳುವುದು

ನಿರುಪಯುಕ್ತ. ಸ್ವರೂಪದಲ್ಲಿ ನಾವು ಸಮಾನರು. ಕುಲ ಮತ್ತು ಬಣ್ಣ, ಬುದ್ಧಿ ಮತ್ತು ದೇಹ, ವಾಯುಗುಣ ಮತ್ತು ದೇಶ ಈ ವ್ಯತ್ಯಾಸಗಳು ಅಶಾಶ್ವತ. ಇದೇ ರೀತಿ ಎಲ್ಲಾ ಧರ್ಮಗಳೂ ಸಾರಭೂತವಾಗಿ, ಸಮಾನವಾಗಿವೆ. ನೀವು ಕುರಾನನ್ನು ಓದಿದರೆ, ಅದನ್ನು ಒಬ್ಬ ಮುಸ್ಲಿಮನ ಕಣ್ಣಿನ ಮೂಲಕ ಓದಬೇಕು. ನೀವು ಬೈಬಲನ್ನು ಓದಿದರೆ ಒಬ್ಬ ಕ್ರೈಸ್ತನ ಕಣ್ಣಿನ ಮೂಲಕ ಅದನ್ನು ಓದಬೇಕು. ನೀವು ಗೀತೆಯನ್ನು ಓದಿದರೆ ಅದನ್ನು ಒಬ್ಬ ಹಿಂದೂವಿನ ಕಣ್ಣಿನ ಮೂಲಕ ಓದಬೇಕು. ವಿವರಗಳನ್ನು ಪರೀಕ್ಷಿಸಿ, ಅನಂತರ ಒಂದು ಧರ್ಮವನ್ನು ಅಪಹಾಸ್ಯಕ್ಕೆ ಗುರಿಮಾಡುವುದರಿಂದ ಏನು ಪ್ರಯೋಜನ? ಬೈಬಲಿನ ಜೆನೆಸಿಸ್(ಸೃಷ್ಟಿ) ಅಥವಾ ಮ್ಯಾಥ್ಯೂನ ಮೊಟ್ಟಮೊದಲನೆಯ ಅಧ್ಯಾಯವನ್ನೇ ತೆಗೆದುಕೊಳ್ಳಿ. ನಾವು ಒಂದು ದೀರ್ಘ ವಂಶಾವಳಿಯನ್ನು ಓದುತ್ತೇವೆ. ಅನಂತರ ಕೊನೆಯಲ್ಲಿ ಏಸುವು ಒಬ್ಬ ಕನ್ಯೆಗೆ ಜನಿಸಿದ ಎಂದು ನಮಗೆ ಹೇಳಲಾಗಿದೆ. ನೀವೊಂದು ಕುರುಡುಗೋಡೆಗೆ ಎದುರಾಗುತ್ತೀರಿ. ಆದರೆ ನಾನು ಅದೆಲ್ಲವನ್ನೂ ಕ್ರೈಸ್ತನೊಬ್ಬನ ಕಣ್ಣಿನಿಂದ ಓದಬೇಕು".

ಶ್ರೀ ಕೀಥಾನ್ ಹೇಳಿದರು : "ಹಾಗಾದರೆ, ನಮ್ಮ ಬೈಬಲಿನಲ್ಲಿ ಕೂಡ, ಮೋಸಸ್ ಮತ್ತು ಏಸುಗಳ ಕಥೆ ಇದೆ. ಅವರನ್ನು ಸಮಾನರೆಂದು ನಾವು ಭಾವಿಸಬೇಕೆ?"

"ಹೌದು", ಎಂದರು ಗಾಂಧೀಜಿ. "ಎಲ್ಲಾ ಪ್ರವಾದಿಗಳೂ ಸಮಾನರು. ಅದು ಒಂದು ಸಮತಲದ ಮೈದಾನ."

"ಐನ್‌ಸ್ಟೈನನ ಸಾಪೇಕ್ಷತಾವಾದದ ಪರಿಭಾಷೆಯಲ್ಲಿ ನಾವು ಆಲೋಚಿಸಿದರೆ ಎಲ್ಲವೂ ಸಮಾನವಾದವು. ಆದರೆ ಈ ಸಮಾನತೆಯನ್ನು ನಾನು ಉಚಿತವಾಗಿ ನಿರೂಪಿಸಲಾರೆ."

"ಅವು ಸಮಾನವಾಗಿ ಸತ್ಯ ಮತ್ತು ಸಮಾನವಾಗಿ ಅಪರಿಪೂರ್ಣ ಎಂದು ನಾನು ಹೇಳುವುದು ಆ ಕಾರಣದಿಂದಲೇ. ನೀವು ರೇಖೆಯನ್ನು ಹೆಚ್ಚು ಸೂಕ್ಷ್ಮವಾಗಿ ಎಳೆದಷ್ಟೂ, ಅದು ಯೂಕ್ಲಿಡನ ನಿಜವಾದ ಸರಳರೇಖೆಯನ್ನು ಹೆಚ್ಚು ಹತ್ತಿರ ಸಮೀಪಿಸುತ್ತದೆ. ಆದರೆ ಅದು ಎಂದಿಗೂ ನಿಜವಾದ ಸರಳರೇಖೆ ಆಗಿರುವುದಿಲ್ಲ. ಧರ್ಮವೃಕ್ಷ ಒಂದೇ. ಆದರೆ ಅದರ ಕೊಂಬೆಗಳ ನಡುವೆ ಅದೇ ಭೌತಿಕ ಸಮಾನತೆ ಇರುವುದಿಲ್ಲ. ಅವೆಲ್ಲವೂ ಬೆಳೆಯುತ್ತಿವೆ. ಬೆಳೆಯುತ್ತಿರುವ ಕೊಂಬೆಗೆ ಸೇರಿದ ಆ ಬಗ್ಗೆ ಮಿತಿ ಮೀರಿ ಹಿಗ್ಗಿ, "ನನ್ನದು ಉತ್ತಮವಾದುದು" ಎಂದು ಹೇಳಕೂಡದು. ಇನ್ನೊಂದಕ್ಕಿಂತ ಯಾವುದೂ ಉತ್ತಮವಲ್ಲ, ಯಾವುದೂ ಕೀಳಲ್ಲ".

ಹರಿಜನ, 13 ಮಾರ್ಚ್ 1937



# 39

# ಗಾಂಧೀಜಿ ಮತ್ತು ದಲಿತವರ್ಗಗಳು

ನಾನು ಒಬ್ಬ ಸನಾತನಿ ಹಿಂದೂ ಎಂದು ಯಾವಾಗಲೂ ಹೇಳಿಕೊಂಡಿದ್ದೇನೆ. ಧರ್ಮಗ್ರಂಥಗಳ ಬಗ್ಗೆ ನಾನು ಪೂರ್ಣವಾಗಿ ಅಜ್ಞ ಎಂದೇನಲ್ಲ. ನಾನು ಸಂಸ್ಕೃತದಲ್ಲಿ ದೊಡ್ಡ ಪಂಡಿತನಲ್ಲ. ವೇದಗಳನ್ನು ಮತ್ತು ಉಪನಿಷತ್ತುಗಳನ್ನು ನಾನು ಅನುವಾದದಲ್ಲಿ ಮಾತ್ರ ಓದಿದ್ದೇನೆ. ಆದ್ದರಿಂದ ಸಹಜವಾಗಿಯೇ ನನ್ನದು ಅವುಗಳ ಪಾಂಡಿತ್ಯ ಪೂರ್ಣವಾದ ಅಧ್ಯಯನವಲ್ಲ. ಅವುಗಳನ್ನು ಕುರಿತ ನನ್ನ ಜ್ಞಾನ ಯಾವ ರೀತಿಯಲ್ಲೂ ಅಗಾಧವಲ್ಲ. ಆದರೆ ನಾನು ಅವನ್ನು ಒಬ್ಬ ಹಿಂದೂ ಮಾಡಬೇಕಾದಂತೆ ಅಧ್ಯಯನ ಮಾಡಿದ್ದೇನೆ ಮತ್ತು ಅವುಗಳ ನಿಜವಾದ ಭಾವವನ್ನು ಗ್ರಹಿಸಿದ್ದೇನೆಂದು ಹೇಳುತ್ತೇನೆ. ನಾನು ಇಪ್ಪತ್ತೊಂದರ ವಯಸ್ಸನ್ನು ತಲುಪುವ ಹೊತ್ತಿಗೆ ಬೇರೆ ಧರ್ಮಗಳ ಅಧ್ಯಯನವನ್ನು ಮಾಡಿದ್ದೆ.

ಹಿಂದೂಧರ್ಮ ಮತ್ತು ಕ್ರೈಸ್ತಮತಗಳ ನಡುವೆ ನಾನು ತೂಗಾಡುತ್ತಿದ್ದ ಕಾಲವೊಂದಿತ್ತು. ನನ್ನ ಮನಸ್ಸಿನ ಸಮತೋಲವನ್ನು ಮತ್ತೆ ಗಳಿಸಿಕೊಂಡ ಮೇಲೆ, ನನಗೆ ಆತ್ಮೋದ್ಧಾರ ಹಿಂದೂಮತದ ಮೂಲಕ ಮಾತ್ರವೇ ಸಾಧ್ಯ ಎಂದು ಕಂಡಿತು ಮತ್ತು ಹಿಂದೂಮತದಲ್ಲಿ ನನ್ನ ಶ್ರದ್ಧೆ ಇನ್ನೂ ಆಳವಾಯಿತು ಮತ್ತು ಹೆಚ್ಚು ತಿಳಿವಳಿಕೆಯಿಂದ ಕೂಡಿತು.

ಆದರೆ ಆಗ ಕೂಡ ನಾನು ಅಸ್ಪೃಶ್ಯತೆ ಹಿಂದೂಧರ್ಮದ ಅಂಗವಲ್ಲ ಮತ್ತು, ಅದು ಅದರ ಅಂಗವಾಗಿದ್ದಲ್ಲಿ, ಅಂಥ ಹಿಂದೂಧರ್ಮ ನನಗಲ್ಲ ಎಂದು ನಂಬಿದ್ದೆ.

ನಿಜ, ಹಿಂದೂಧರ್ಮವು ಅಸಪೃಶ್ಯತೆಯನ್ನು ಒಂದು ಪಾಪವೆಂದು

ಪರಿಗಣಿಸುವುದಿಲ್ಲ. ಶಾಸ್ತ್ರಗಳ ವ್ಯಾಖ್ಯಾನವನ್ನು ಕುರಿತು ನಾನು ಯಾವುದೇ ವಾದಕ್ಕೆ ಇಳಿಯಲು ಇಚ್ಛಿಸುವುದಿಲ್ಲ. ಭಾಗವತ ಅಥವಾ ಮನುಸ್ಮೃತಿಯಿಂದ ಆಧಾರಗಳನ್ನು ಉದಹರಿಸುವ ಮೂಲಕ ನನ್ನ ವಾದವನ್ನು ಸ್ಥಾಪಿಸುವುದು ನನಗೆ ಕಷ್ಟವಾಗಬಹುದು. ಆದರೆ ಹಿಂದೂಧರ್ಮದ ಮನೋಭಾವವನ್ನು ನಾನು ಅರ್ಥಮಾಡಿಕೊಂಡಿದ್ದೇನೆಂದು ಹೇಳುತ್ತೇನೆ. ಅಸ್ಪೃಶ್ಯತೆಗೆ ಒಪ್ಪಿಗೆ ನೀಡುವಲ್ಲಿ ಹಿಂದೂಧರ್ಮ ಪಾಪವೆಸಗಿದೆ. ಅದು ನಮ್ಮನ್ನು ಕೆಳಕ್ಕೆ ಇಳಿಸಿದೆ, ನಮ್ಮನ್ನು ಬ್ರಿಟಿಷ್ ಸಾಮ್ರಾಜ್ಯದ ಅಂತ್ಯಜರನ್ನಾಗಿ ಮಾಡಿದೆ. ಮುಸಲ್ಮಾನರು ಕೂಡ ಈ ಪಾಪದ ಸೋಂಕನ್ನು ನಮ್ಮಿಂದ ಪಡೆದರು. ದಕ್ಷಿಣ ಆಫ್ರಿಕದಲ್ಲಿ, ಪೂರ್ವ ಆಫ್ರಿಕದಲ್ಲಿ ಮತ್ತು ಕೆನಡಾದಲ್ಲಿ ಹಿಂದೂಗಳಷ್ಟೇ ಮುಸಲ್ಮಾನರೂ ಅಂತ್ಯಜರಂತೆ ಪರಿಗಣಿತರಾದರು. ಈ ಎಲ್ಲಾ ಕೇಡು ಅಸ್ಪೃಶ್ಯತೆಯ ಪಾಪದ ಫಲಗಳಾಗಿ ಒದಗಿದವು.

*ಯಂಗ್ ಇಂಡಿಯಾ*, 27 ಏಪ್ರಿಲ್ 1921



# 40

# ಅಸ್ಪೃಶ್ಯತೆಯ ಪಾಪ

ಅಸ್ಪೃಶ್ಯತೆ ಧರ್ಮದ ಒಂದು ಶಾಸನವಲ್ಲ. ಅದು ಸೈತಾನನ ಒಂದು ತಂತ್ರ. ಸೈತಾನನು ಯಾವಾಗಲೂ ಧರ್ಮಗ್ರಂಥಗಳನ್ನು ಉಲ್ಲೇಖಿಸಿದ್ದಾನೆ. ಆದರೆ ಧರ್ಮಗ್ರಂಥಗಳು ತರ್ಕವನ್ನು ಮತ್ತು ಸತ್ಯವನ್ನು ಮೀರಲಾರವು. ಅವುಗಳ ಉದ್ದೇಶ ತರ್ಕವನ್ನು ಶುದ್ಧಿಗೊಳಿಸುವುದು ಮತ್ತು ಸತ್ಯವನ್ನು ಬೆಳಗುವುದು. ವೇದಗಳು ಆ ಯಜ್ಞವನ್ನು ಸೂಚಿಸಿವೆ, ಸಹಿಸಿವೆ ಅಥವಾ ಅನುಮೋದಿಸಿವೆ ಎಂದು ಹೇಳಲಾಗಿದೆ ಎಂಬ ಕಾರಣದಿಂದ ನಾನು ಒಂದು ನಿಷ್ಕಲಂಕ ಕುದುರೆಯನ್ನು ಸುಡಲು ಹೊರಡುವುದಿಲ್ಲ. ನನಗೆ ವೇದಗಳು ದೈವೀರೂಪದವು ಮತ್ತು ಅಲಿಖಿತವಾದವು. 'ಅಕ್ಷರ ಕೊಲ್ಲುತ್ತದೆ'. ಬೆಳಕು ನೀಡುವುದು ಭಾವ. ವೇದಗಳ ಭಾವವು ಪರಿಶುದ್ಧತೆ, ಸತ್ಯ, ನಿಷ್ಕಪಟತೆ, ಬ್ರಹ್ಮಚರ್ಯ, ವಿನಯ, ಸರಳತೆ, ಕ್ಷಮೆ, ದೈವಭಕ್ತಿ ಮತ್ತು ಒಬ್ಬ ಪುರುಷನನ್ನು ಅಥವಾ ಸ್ತ್ರೀಯನ್ನು ಉದಾತ್ತ ಮತ್ತು ಧೀರರನ್ನಾಗಿ ಮಾಡುವ ಎಲ್ಲವೂ. ದೇಶದ ಬಹುಸಂಖ್ಯೆಯ ಮತ್ತು ತೊಂದರೆ ಹೇಳಿಕೊಳ್ಳದ ಜಾಡಮಾಲಿಗಳನ್ನು ನಾಯಿಗಳಿಗಿಂತ ಕಡೆಯಾಗಿ ತುಚ್ಛವಾಗಿ ಮತ್ತು ಥೂ ಎಂದು ಉಗಿಯುವಂತೆ ಕಾಣುವುದರಲ್ಲಿ ಉದಾತ್ತತೆಯಾಗಲಿ ಧೀರೋದಾತ್ತತೆಯಾಗಲೀ ಇಲ್ಲ.

*ಯಂಗ್ ಇಂಡಿಯಾ*, 19 ಜನವರಿ 1921



# 41

## ವಾರದ ಪತ್ರ

ಅಸ್ಪೃಶ್ಯತೆಯನ್ನು ಕುರಿತ ನನ್ನ ಅಭಿಪ್ರಾಯಗಳು ನನ್ನ ಪಾಶ್ಚಾತ್ಯ ವಿದ್ಯಾಭ್ಯಾಸದ ಫಲವಲ್ಲ. ನಾನು ಇಂಗ್ಲೆಂಡಿಗೆ ಹೋಗುವುದಕ್ಕಿಂತ ಬಹಳ ಮುಂಚೆ, ಧರ್ಮಗ್ರಂಥಗಳನ್ನು ಓದುವುದಕ್ಕಿಂತ ಬಹಳ ಮುಂಚೆ ಮತ್ತು ಆ ಅಭಿಪ್ರಯಾಗಳಿಗೆ ಸ್ವಲ್ಪವೂ ಅನುಕೂಲಕರವಾಗಿರದ ವಾತಾವರಣವೊಂದರಲ್ಲಿ ನಾನು ಅವನ್ನು ರೂಪಿಸಿಕೊಂಡಿದ್ದೆ. ಏಕೆಂದರೆ ನಾನು ಸಾಂಪ್ರದಾಯಿಕ ವೈಷ್ಣವ ಕುಟುಂಬವೊಂದರಲ್ಲಿ ಹುಟ್ಟಿದ್ದೆ. ಆದರೂ ವಿವೇಚನಾಶಕ್ತಿ ಉದಯಿಸುವ ವರ್ಷವನ್ನು ತಲುಪಿದಂದಿನಿಂದಲೂ ನಾನು ಈ ವಿಷಯದಲ್ಲಿ ರಾಜಿಗೆ ಅವಕಾಶವಿಲ್ಲದ ನನ್ನ ಅಭಿಪ್ರಾಯಗಳನ್ನು ದೃಢವಾಗಿ ತಾಳಿದ್ದೇನೆ. ಅನಂತರದಲ್ಲಿ ಹಿಂದೂಧರ್ಮದ ತುಲನಾತ್ಮಕ ಅಧ್ಯಯನ ಮತ್ತು ಅನುಭವ ಅವನ್ನು ದೃಢಪಡಿಸಿವೆ. ಯಾವುದೇ ಧರ್ಮಗ್ರಂಥ ಐದನೆಯ ವರ್ಣವೊಂದನ್ನು ಹೆಸರಿಸುವುದಿಲ್ಲ ಎಂಬ ಸಂಗತಿಗೆ ವಿರುದ್ಧವಾಗಿ, ಮತ್ತು ಬ್ರಾಹ್ಮಣನನ್ನೂ ಭಂಗಿಯನ್ನೂ ಸಮಾನಾಗಿ ಕಾಣಬೇಕು ಎಂಬ ಗೀತೆಯ ಸುವ್ಯಕ್ತ ವಿಧಿಗೆ ವಿರುದ್ಧವಾಗಿ ನಾವು ಹಿಂದೂಧರ್ಮದಲ್ಲಿನ ಈ ಘೋರ ಕಲಂಕವನ್ನು ಉಳಿಸಿಕೊಂಡು ಬರುವಲ್ಲಿ ನಾವು ಪಟ್ಟುಹಿಡಿದಿರುವುದು ಹೇಗೆ ಎನ್ನುವುದು ನನಗೆ ಅರ್ಥವಾಗುವುದಿಲ್ಲ. ಬ್ರಾಹ್ಮಣನನ್ನು ಮತ್ತು ಭಂಗಿಯನ್ನು ಸಮಾನವಾಗಿ ಕಾಣವುದು ಎಂದರೆ ನಿಜವಾದ ಬ್ರಾಹ್ಮಣನಿಗೆ ನೀವು ಅವನಿಗೆ ಯುಕ್ತವಾದ ಗೌರವವನ್ನು ನೀಡಕೂಡದು ಎಂದು ಅರ್ಥವಲ್ಲ. ಬ್ರಾಹ್ಮಣ ಮತ್ತು ಭಂಗಿ ಇಬ್ಬರೂ ನಮ್ಮ ಸೇವೆಯನ್ನು ಸ್ವೀಕರಿಸಲು ಸಮಾನವಾಗಿ ಹಕ್ಕು ಪಡೆದಿದ್ದಾರೆ;

ತನ್ನ ಮಕ್ಕಳನ್ನು ಸಾರ್ವಜನಿಕ ಶಿಕ್ಷಣಶಾಲೆಗೆ ಕಳುಹಿಸುವ, ಸಾರ್ವಜನಿಕ ದೇವಸ್ಥಾನಗಳಿಗೆ ಹೋಗುವ, ಸಾರ್ವಜನಿಕ ಬಾವಿಗಳನ್ನು ಬಳಸುವ ಮುಂತಾದ ಹಕ್ಕುಗಳನ್ನು ಇತರ ಯಾವನೇ ಹಿಂದೂ ಹೊಂದಿರುವ ಆಧಾರದ ಮೇಲೆ ಅವೇ ಹಕ್ಕುಗಳನ್ನು ನಾವು ಭಂಗಿಗೆ ನೀಡಬೇಕು ಎಂದು ಅದರ ಅರ್ಥ.

*ಯಂಗ್ ಇಂಡಿಯಾ*, 17 ಫೆಬ್ರುವರಿ 1927



# 42

# ಸಾವಿರತಲೆಯ ಭೂತ

ಪತ್ರಲೇಖಕನೊಬ್ಬ ಕೇಳುತ್ತಾನೆ: "ಸ್ಪರ್ಶದ ಮತ್ತು ದೃಷ್ಟಿಯ ದೋಷಗಳು ವೇದ ಮೂಲ ಎಂದು ನೀವು ಭಾವಿಸುತ್ತೀರಾ?"

ಸಾಕ್ಷಾತ್ತಾದ ಪರಿಚಯವನ್ನು ಆಧರಿಸಿದ ಅಧಿಕಾರದಿಂದ ನಾನು ಹೇಳಲಾಗದಿದ್ದರೂ, ನನಗೆ ವೇದಗಳ ಪರಿಶುದ್ಧತೆಯಲ್ಲಿ ಪೂರ್ಣ ಭರವಸೆ ಇದೆ. ಆದ್ದರಿಂದ ಸ್ಪರ್ಶದ ಮತ್ತು ದೃಷ್ಟಿಯ ದೋಷಗಳಿಗೆ ವೇದಗಳಲ್ಲಿ ಆಧಾರವಿಲ್ಲ ಎಂದು ಒತ್ತಿ ಹೇಳಲು ನನಗೆ ಯಾವ ಹಿಂಜರಿಕೆಯೂ ಇಲ್ಲ. ಆದರೂ ವೇದಮೂಲವೆಂದು ಯಾವುದನ್ನೇ ಹೇಳಿರಲಿ ಅದು ನೈತಿಕಪ್ರಜ್ಞೆಗೆ ಅಸಹ್ಯವಾಗಿದ್ದರೆ ಅದನ್ನು ವೇದದ ಮನೋಭಾವಕ್ಕೆ ಮತ್ತು ಪ್ರಾಯಶಃ ಅದಕ್ಕಿಂತಲೂ ಹೆಚ್ಚಾಗಿ, ಮೂಲಭೂತ ನೀತಿಸೂತ್ರಗಳಿಗೆ ವಿರುದ್ಧವಾಗಿದೆ ಎಂದು ಕೂಡಲೇ ತಿರಸ್ಕರಿಸಬೇಕು ಎಂದು ಸೇರಿಸಲು ನಾನು ಇಚ್ಛಿಸುತ್ತೇನೆ.

ಮುಂದಿನ ನಾಲ್ಕು ಪ್ರಶ್ನೆಗಳನ್ನು ಹೀಗೆ ಸಂಗ್ರಹಿಸಬಹುದು: "ಕರ್ಮಕಾಂಡವು ಕಾಂತೀಯ ನಿಯಮಗಳನ್ನು (law of magnetism) ಜ್ಞಾನವನ್ನು ಆಧರಿಸಿದೆ, ಮತ್ತು ಸ್ಪರ್ಶ ಹಾಗೂ ದೃಷ್ಟಿ, ಜಾತಾಶೌಚ ಮತ್ತು ಮೃತಾಶೌಚಗಳನ್ನು ಕುರಿತ ನಿಯಮಗಳು ಮನಸ್ಸನ್ನು ಶುದ್ಧಿಗೊಳಿಸಲು ಉದ್ದಿಷ್ಟವಾಗಿವೆ ಎಂದು ನೀವು ಭಾವಿಸುವುದಿಲ್ಲವೇ?"

ಅವುಗಳ ಉದ್ದೇಶ ಹೀಗಿರುವ ಮಟ್ಟಿಗೆ ಅವಕ್ಕೆ ಸ್ವಲ್ಪ ಮಟ್ಟಿನ ಸಾಪೇಕ್ಷ ಬೆಲೆಯಿದೆ. ಆದರೆ ವೇದಗಳು, ಉಪನಿಷತ್ತುಗಳು, ಪುರಾಣಗಳು, ಇತರ ಎಲ್ಲಾ

ಶಾಸ್ತ್ರಗಳು ಹಾಗೂ ಪ್ರಪಂಚದ ಇತರ ಧರ್ಮಗಳು ಯಾವುದೇ ಸಂದೇಹಕ್ಕೆಡೆಗೊಡದ ಶಬ್ದಗಳಲ್ಲಿ ಹೀಗೆ ಘೋಷಿಸುತ್ತವೆ : ಮನಸ್ಸಿನ ಶುದ್ಧೀಕರಣ ಒಂದು ಆಂತರಿಕ ಪ್ರಕ್ರಿಯೆ; ಮನಸ್ಸಿನ ಮೇಲೆ ಮನಸ್ಸು ಬೀರುವ ಸೂಕ್ಷ್ಮ ಕಾಂತೀಯ ಪ್ರಭಾವದೊಡನೆ ಹೋಲಿಸಿದಾಗ ಭೌತಿಕ ದೇಹಗಳ ಪರಸ್ಪರ ಕ್ರಿಯೆಯಿಂದ ಹುಟ್ಟುವ ಕಾಂತೀಯಶಕ್ತಿಗೆ ಏನೇನೂ ಬೆಲೆಯಿಲ್ಲ; ಬಾಹ್ಯ ಶುದ್ಧಿಕರ್ಮಗಳು ಮಾನವನನ್ನು ತನ್ನ ಸಹಮಾನವರ ಮೇಲೆ ಶ್ರೇಷ್ಠತೆಯನ್ನು ತನಗೆ ತೆಗೆದುಕೊಳ್ಳುವಂತೆ ಮಾಡಿದರೆ ಮತ್ತು ಇತರರನ್ನು ವಾಸ್ತವವಾಗಿ ಪ್ರಾಣಿಗಳಂತೆ ಅಥವಾ ಅದಕ್ಕೂ ಕಡೆಯಾಗಿ ನೋಡುವಂತೆ ಮಾಡಿದರೆ ಅವು ಆತ್ಮಘಾತಕವಾಗುತ್ತವೆ.

* * *

ನಿಯಮಗಳು ತರ್ಕಕ್ಕೆ ಒಪ್ಪಿಗೆಯಾಗಬೇಕು ಮತ್ತು ಒಳಗಿನ ಆತ್ಮವನ್ನು ತುಳಿದುಹಾಕಲು ಅವಕ್ಕೆ ಎಂದಿಗೂ ಅವಕಾಶ ಕೊಡಕೂಡದು. ಅಸ್ಪೃಶ್ಯತೆಯನ್ನು ಕುರಿತ ನಿಯಮಗಳು ಆತ್ಮದ ಬೆಳವಣಿಗೆಗೆ ಹಾನಿಕರವಾಗಿವೆ ಮತ್ತು ಹಿಂದೂಧರ್ಮದಲ್ಲಿ ಉತ್ಕೃಷ್ಟವಾಗಿ, ಉದಾತ್ತವಾಗಿ ಇರುವ ಎಲ್ಲಕ್ಕೂ ಅವು ಸಂಪೂರ್ಣವಾಗಿ ವಿರುದ್ಧವಾಗಿವೆ ಎಂಬುದನ್ನು ತೋರಿಸಲಾಗಿದೆ ಮತ್ತು ತೋರಿಸಲೂ ಸಾಧ್ಯ.

*ಯಂಗ್ ಇಂಡಿಯಾ*, 3 ಅಕ್ಟೋಬರ್ 1929



# 43

# ಡಾ. ಅಂಬೇಡ್ಕರರ ಆಪಾದನೆ

ಕಳೆದ ಮೇ ತಿಂಗಳಲ್ಲಿ ಲಾಹೋರಿನ ಜಾಟ್-ಪಾಟ್-ತೋರಕ್ ಮಂಡಲದ ವಾರ್ಷಿಕ ಅಧಿವೇಶನದ ಅಧ್ಯಕ್ಷತೆಯನ್ನು ಡಾ. ಅಂಬೇಡ್ಕರ್ ವಹಿಸಬೇಕಾಗಿದ್ದ ಸಂಗತಿಯನ್ನು ಓದುಗರು ಜ್ಞಾಪಿಸಿಕೊಳ್ಳಬಹುದು. ಆದರೆ ಆ ಅಧಿವೇಶನವನ್ನೇ ರದ್ದುಗೊಳಿಸಲಾಯಿತು, ಏಕೆಂದರೆ ಡಾ. ಅಂಬೇಡ್ಕರರ ಭಾಷಣ ಸ್ವಾಗತಸಮಿತಿಗೆ ಅಸಮ್ಮತವಾಗಿ ಕಂಡಿತು.

ಡಾ. ಅಂಬೇಡ್ಕರರು ಸ್ವಾಗತಸಮಿತಿಯವರಿಗೆ ಸೋಲುವವರಾಗಿರಲಿಲ್ಲ. ಸ್ವಂತ ಖರ್ಚಿನಲ್ಲಿ ಆ ಭಾಷಣವನ್ನು ಪ್ರಕಟಿಸುವ ಮೂಲಕ ಅವರು ಸಮಿತಿ ತಮ್ಮನ್ನು ತಿರಸ್ಕರಿಸಿದ್ದಕ್ಕೆ ಉತ್ತರ ನೀಡಿದರು. ಅದಕ್ಕೆ ಅವರು ಎಂಟಾಣೆ ಬೆಲೆ ಇಟ್ಟಿದ್ದಾರೆ. ಅದನ್ನು ಎರಡಾಣೆಗೆ ಅಥವಾ ಕನಿಷ್ಠ ನಾಲ್ಕಾಣೆಗೆ ಇಳಿಸುವಂತೆ ಸೂಚಿಸಲಿಚ್ಛಿಸುತ್ತೇನೆ.

ಯಾವನೇ ಸುಧಾರಕ ಆ ಭಾಷಣವನ್ನು ಕಡೆಗಣಿಸಲಾರ. ಸಂಪ್ರದಾಯಸ್ಥರು ಅದನ್ನು ಓದುವುದರಿಂದ ಲಾಭಪಡೆಯುತ್ತಾರೆ. ಅಂದರೆ ಈ ಭಾಷಣ ಆಕ್ಷೇಪಣೆಗೆ ಹೊರತಾಗಿದೆ ಎಂದು ಹೇಳಿದಂತಾಗುವುದಿಲ್ಲ. ಅದು ಗಂಭೀರವಾದ ಆಕ್ಷೇಪಣೆಗೆ ಒಳಗಾಗಿದೆ ಎಂಬ ಕಾರಣಕ್ಕಾಗಿ ಮಾತ್ರವೇ ಆದರೂ ಅದನ್ನು ಓದಬೇಕು. ಡಾ. ಅಂಬೇಡ್ಕರ್ ಹಿಂದೂಧರ್ಮಕ್ಕೆ ಒಂದು ಸವಾಲು. ಹಿಂದೂವಾಗಿ ಬೆಳೆಸಲ್ಪಟ್ಟು, ಹಿಂದೂರಾಜನೊಬ್ಬನಿಂದ ಶಿಕ್ಷಣ ಪಡೆದ ಅವರು ಸವರ್ಣಹಿಂದೂಗಳು ಎನಿಸಿಕೊಂಡವರ ಕೈಗಳಲ್ಲಿ ತಾವು ಮತ್ತು ತಮ್ಮವರು ಪಡೆದ ಪುರಸ್ಕಾರದಿಂದ ಹಿಂದೂಗಳ ಬಗ್ಗೆ ಎಷ್ಟು ಜಿಗುಪ್ಸೆಪಟ್ಟಿದ್ದಾರೆಂದರೆ

ಅವರು ಹಿಂದೂಗಳನ್ನು ಮಾತ್ರವಲ್ಲದೆ ತಮ್ಮ ಮತ್ತು ಅವರ ಸಮಾನ ಆಸ್ತಿಯಾಗಿರುವ ಧರ್ಮವನ್ನೇ ತೊರೆಯಲು ಉದ್ದೇಶಿಸಿದ್ದಾರೆ. ಆ ಧರ್ಮದ ಅನುಯಾಯಿಗಳ ಒಂದು ಭಾಗದ ವಿರುದ್ಧವಾದ ತಮ್ಮ ಜಿಗುಪ್ಸೆಯನ್ನು ಆ ಧರ್ಮಕ್ಕೆ ವರ್ಗಾಯಿಸಿದ್ದಾರೆ.

ಆದರೆ ಇದಕ್ಕಾಗಿ ಆಶ್ಚರ್ಯಪಡಬೇಕಾಗಿಲ್ಲ. ಆದರೂ ಒಂದು ವ್ಯವಸ್ಥೆಯ ಅಥವಾ ಒಂದು ಸಂಸ್ಥೆಯ ಗುಣವನ್ನು ಅದರ ಪ್ರತಿನಿಧಿಗಳ ವರ್ತನೆಯಿಂದ ಮಾತ್ರವೇ ತೀರ್ಮಾನಿಸಲು ಸಾಧ್ಯ. ಸವರ್ಣ ಹಿಂದೂಗಳ ಬಹು ದೊಡ್ಡ ಸಂಖ್ಯೆ ಅಸ್ಪೃಶ್ಯರೆಂದು ತಾವು ವರ್ಗೀಕರಿಸಿದ್ದ ತಮ್ಮ ಸಹಧರ್ಮೀಯರ ವಿರುದ್ಧ ಅಮಾನವೀಯವಾಗಿ ತಾವು ವರ್ತಿಸಿದ್ದು ಮಾತ್ರವೇ ಅಲ್ಲದೆ ತಮ್ಮ ವರ್ತನೆಯನ್ನು ತಮ್ಮ ಧರ್ಮಗ್ರಂಥಗಳ ಆಧಾರದ ಮೇಲೆ ಸ್ಥಾಪಿಸಿದ್ದರು ಎನ್ನುವುದನ್ನು ಡಾ. ಅಂಬೇಡ್ಕರ್ ಕಂಡರು. ಅವುಗಳನ್ನು ಅವರು ಹುಡುಕಲು ಪ್ರಾರಂಭಿಸಿದಾಗ ಅಸ್ಪೃಶ್ಯತೆ ಮತ್ತು ಅದು ಸೂಚಿಸುವ ಎಲ್ಲದರಲ್ಲಿ ಹಿಂದೂಗಳ ನಂಬಿಕೆಗೆ ಸಮೃದ್ಧವಾದ ಆಧಾರವನ್ನು ಅಲ್ಲಿ ಕಂಡರು. ಭಾಷಣಕಾರರು ತಮ್ಮ ಮೂರು ಆಪಾದನೆಗಳಿಗೆ – ಅಮಾನವೀಯ ವರ್ತನೆ, ಅದನ್ನು ಎಸಗಿದವರು ಅದಕ್ಕೆ ಮಾಡಿದ ನಾಚಿಕೆಯಿಲ್ಲದ ಸಮರ್ಥನೆ ಮತ್ತು ಈ ಸಮರ್ಥನೆಗೆ ಅವರ ಧರ್ಮಗ್ರಂಥಗಳು ಆಧಾರವಾಗಿತ್ತು ಎಂಬ ತದನಂತರದ ಶೋಧನೆ ರುಜುವಾತಾಗಿ ಖಚಿತ ಆಧಾರಗಳನ್ನು ಉಲ್ಲೇಖಿಸಿದ್ದಾರೆ.

*ಹರಿಜನ*, 11 ಜುಲೈ 1936

